**ನಡವಳಿಕೆ**

ಈ ತೆರನ ದೇವರನ್ನು, ಅವನಿಗೂ ಪ್ರಪಂಚಕ್ಕೂ ಇರುವ ಸಂಬಂಧ ಗಳನ್ನು ನಿರ್ಣಯಿಸಿಯಾದ ಬಳಿಕ, ಮನುಷ್ಯನು ದೇವರ ಕಡೆಗೆ ಯಾವ ನಡವಳಿಕೆಯನ್ನು ಇಟ್ಟುಕೊಂಡಿರಬೇಕು ಎಂಬ ವಿಚಾರ ಬರುತ್ತದೆ.

'ಅವನೇ ಏಟನ್—ಉಳಿದವರು ಮಿಥ್ಯ' ಎಂದಿತು ಒಂದು ಜನವರ್ಗ. 'ದೇವರು ಒಬ್ಬನೇ, ಮಹಮ್ಮದನು ಅವನ ಪ್ರವಾದಿ' ಎಂದಿತು ಒಂದು ಬಳಗ; ಮತ್ತೊಂದಕ್ಕೆ ಮೋಸೆಯೇ ದೇವರ ದೂತ. ಶಿಂಟೋ ಮತದವರಲ್ಲಿ ಜಪಾನಿ ಅರಸು ಆ ಗದ್ದುಗೆಯನ್ನೇರುತ್ತಾನೆ. ಹೀಗೆ ದೇವರೂ, ಅವನ ಪ್ರತಿನಿಧಿ ಗಳೂ ಏರ್ಪಟ್ಟರು. ಮುಂದೆ ನಮ್ಮ ಕರ್ತವ್ಯವೆಂದರೆ—ಅವನ ಪ್ರವಾದಿ ಗಳೋ, ಆಯಾಯ ದೇವರುಗಳ ಪ್ರತಿನಿಧಿಗಳೋ ಅಂದಂತೆ ವರ್ತಿಸುವುದು; ದೇವನಾದವನನ್ನು ಪೂಜಿಸುವುದು, ಅವನನ್ನು ಸೇರಲು ಪ್ರಯತ್ನಿಸುವುದು.

**ಪರಲೋಕದ ಮಿತಿ**

ಕ್ರಿಸ್ತೀಯರನ್ನು ಬರಮಾಡಿಕೊಳ್ಳಲು ಪರಲೋಕದಲ್ಲಿ ಯಹೋವ ನಿದ್ದಾನೆ. ಯಹೂದಿಯರಿಗೆ ಯಹೋವನಿದ್ದಾನೆ. ಶರಣರಲ್ಲದವರು ಶಿವನನ್ನು ಸೇರಲಾರರು. ವೈಷ್ಣವನು ಶಿವನ ಬಳಿಗೆ ಸುಳಿಯಲಾರನು. ವಿಷ್ಣುವಿನ ಬಳಿಗೆ ಶೈವನು ಬರುವಂತಿಲ್ಲ. ದೈವವಾದಿತ್ವದ ಜತೆಗೆ ಇಂಥ ಸಂಕುಚಿತ ವೃತ್ತಿಗಳೂ ಬೆಳೆದಿವೆ.

**ಒಲಿಯುವ ಬಗೆ**

ಈ ದೇವರುಗಳನ್ನು ಒಲಿಸುವ ಬಗೆಯಾವುದು—ಎಂದರೆ ಪೂಜೆ, ಭಜನೆ, ಧ್ಯಾನ, ಮನನ. ತಾನು ಬೆಳೆದುಬಂದಿರುವ ಜಗತ್ತನ್ನು ಕಡೆಗಣಿಸಿ, ಅಲ್ಲಗಳೆದು, ಅವನೇ ನಿಜವೆಂದು ಹಂಬಲಿಸುವುದು ಈ ಪೂಜೆಯ ಸಾರ. ಈ ಪೂಜೆಯ ರೀತಿಗಳೂ ಅನೇಕವಾಗಿವೆ. ಭಜನೆಯಿಂದಲೇ ವಿಠೋಬನು ಪ್ರೀತನಂತೆ. ರುದ್ರಾಭಿಷೇಕಗಳಿಗೆ ಶಿವನು ವಶ್ಯನು; ಕಾಫಿರರನ್ನು ಸ್ವಮತೀ ಯರನ್ನಾಗಿ ಮಾಡಿದರೆ ಅಲ್ಲಾ ಒಲಿಯಬಹುದು........ಇಂಥವೇ ನೂರಾರು ನಂಬುಗೆಗಳು ಜನರ ಗುಂಪನ್ನು ನಡೆಯಿಸುತ್ತಿವೆ. ಇದರಿಂದ ವ್ಯಕ್ತಿಗೆ— ಜನ್ಮದ ಕೊನೆಗೆ, ಸಾವಿನಾಚೆಗೆ ಸ್ವರ್ಗ ದೊರಕ ಬಹುದು; ಮುಕ್ತಿಯೇ ಪ್ರಾಪ್ತಿಸಬಹುದು. ತುಕಾರಾಮನಂಥವರು ಸಾವು ಬರುವ ಮುನ್ನವೇ ಸಶರೀರಿಗಳಾಗಿ ಅಂತರ್ಧಾನರಾದುದುಂಟು. ಇವೆಲ್ಲ ಪುರಸ್ಕಾರದ ವಿಷಯ

ಗಳಾದುವು. ಅಂಥದನ್ನು ಬಯಸದ ಆಲಸಿಯೊಬ್ಬನಿದ್ದರೆ, ಬರಿದೆ ಅವನನ್ನು ಬಿಡುವುದಿಲ್ಲ. ಅವನ ಸಲುವಾಗಿ ನರಕ ರಚಿಸಿದ್ದಾರೆ. ಕ್ರಿಸ್ತೀಯರಲ್ಲೂ, ಮುಸಲ್ಮಾನರಲ್ಲೂ ಚಿರ ನರಕವಿದೆ; ಎಂದೆಂದೂ ಸೈತಾನನ ರಾಜ್ಯವೇ ಅಲ್ಲಿ. ಬಾಳ್ವೆಯ ೬೦-೮೦ ವರ್ಷಗಳಲ್ಲಿ ಮಾಡಿದ ಅಪರಾಧಗಳಿಗೆ ಯಾವತ್ಕಾಲದ ಶಿಕ್ಷೆ! ಇಲ್ಲವೆ ಹಿಂದೂಗಳಂತೆ, ಅವರ ಪಾಪವು ತೀರುವ ತನಕ ದಂಡನೆ; ವಿವಿಧ ರೂಪಗಳಲ್ಲಿ ದಂಡನೆ. ಕರ್ಮಫಲವಾದ ಪಾಪಪುಣ್ಯಗಳನ್ನು ಸ್ವರ್ಗ ಇಲ್ಲವೆ ನರಕದಲ್ಲಿ ಕಳೆದ ಮೇಲೂ ಜೀವನು ಹುಟ್ಟುವುದು ತಪ್ಪುವುದಿಲ್ಲ; ತಿರುಗಿ ಹುಟ್ಟುತ್ತಾನೆ. ಮೊದಲು ಕರ್ಮಫಲದಿಂದ ಹುಟ್ಟಿದನಾದರೆ, ಅನಂತರ ಅವನು ಹುಟ್ಟಿದುದರಿಂದ ತಿರುಗಿ ಕರ್ಮ ಮಾಡುತ್ತ, ಹೆಚ್ಚಿನ ತೊಳಲಾಟಕ್ಕೆ ಗುರಿಯಾಗುತ್ತಾನೆ. ಈ ಭೀಕರ ಪರಿಸ್ಥಿತಿಯನ್ನು ಯಾವ ಮನಸ್ಸು ಇದಿರಿಸೀತು? ಈ ಬೆದರಿಕೆಯ ಮೇಲೆ ನಿಂತ ಜೀವನದಲ್ಲಿ, ದೇವರು ಬೆರ್ಚಪ್ಪನಲ್ಲದೆ ಬೇರೇನು? "ನಮ್ಮ ತಪ್ಪನ್ನು, ದೌರ್ಬಲ್ಯವನ್ನು ಕ್ಷಮಿಸಿ ಕಾಪಾಡು" ಎಂದು ಕಣ್ಣೀರು ಕರೆಯುವುದೇ ಅವನ ಕೆಲಸ. ಕಂಬನಿಯಿಂದ ಬೊಗಸೆ ತುಂಬಿದರೂ, ದೈವಕ್ಕೆ ಕರುಣೆಯೂ ಬರಲಾರದು. ಇಂಥ ದೈವದ ಒಲವು, ನೀವು ಪ್ರಪಂಚದಲ್ಲಿ ಮಗ್ನರಾಗಿರುವಷ್ಟು ಕಾಲ ನಿಮ್ಮ ಮೇಲೆ ಬೀಳದು–ಎಂಬುದೂ ಒಂದು ಗಾಢವಾದ ನಂಬಿಕೆ.

**ಜೀವನದ ಮೇಲೆ ತಾತ್ಸಾರ**

ದೈವದೃಷ್ಟಿಯು ಹೀಗೆ ಬೆದರಿಕೆಯಿಂದ ಪೀಡಿತವಾದುದು ಮಾತ್ರವಲ್ಲ, ಅದೇ 'ದೇವರು' ಜೀವನವನ್ನು ಕುರಿತು ತಾತ್ಸಾರ ಹುಟ್ಟಿಸಲು ಕಾರಣವಾಗಿದ್ದಾನೆ. ಜೀವನವೆಂಬುದೇ ಒಂದು ಜಂಜಾಟ; ಬದುಕು ಎಂಬುದು ಮಾಯೆ–ಎಂಬ ತೀರ್ಮಾನಗಳು ಮನಸ್ಸನ್ನು ಕಟ್ಟಿಬಿಗಿಯುವಾಗ, ನಮಗೆ ಹಚ್ಚಗಿನ ದೃಷ್ಟಿ ಬಂದೀತೇ? ಈ ನಂಬಿಕೆ, ಸಂಸ್ಕೃತಿಗಳಿಂದ ನಮ್ಮ ನರಗಳು ಹತೋಟಿಯಿಂದೆಷ್ಟು ತಪ್ಪಬಹುದು-ಎಂಬುದನ್ನು ಪರಿಶೀಲಿಸುವ. ಇದಕ್ಕಾಗಿ ನನ್ನದೇ ಒಂದು ಉದಾಹರಣೆಯನ್ನು ಕೊಡುತ್ತೇನೆ.

**ನರಗಳ ದೌರ್ಬಲ್ಯ**

ನನಗೆ ತಿಳಿವಳಿಕೆ ಬಂದಿದೆ ಎಂದು ತಿಳಿದ ಬಳಿಕೇನೆ, ನಡೆದ ಸಂಗತಿ ಇದು. ನಾನು ಶಾಲೆಯನ್ನು ತೊರೆದು, ಗಾಂಧೀಜಿಯವರ ಅನುಯಾಯಿಯಾಗಿ, ಇತರ ಚಟುವಟಿಕೆಗಳ ಜತೆಗೆ ಅಸ್ಪೃಶ್ಯತಾ ನಿವಾರಣೆಗಾಗಿ ಯತ್ನಿ

ಸುತ್ತಿದ್ದ ದಿನಗಳವು. ನಾನು ನಿತ್ಯ ತಿರುಗುವ ಹಾದಿಯಲ್ಲಿ, ಚಿಕ್ಕ ಮಕ್ಕಳು ಅಡ್ಡಾಡುವ ರೂಢಿಯಿತ್ತು. ನನಗೆ ಮಕ್ಕಳನ್ನು ಕಂಡರೆ, ಚಿಟಿಕೆ ಹಾಕಿ ಮಾತನಾಡಿಸುವ ಚಟ. ಅವರ ಗಲ್ಲವನ್ನು ಅಲುಗಿಸಿ, ಮುದ್ದಿಸುವ ಚಟ. ಹೀಗೆ ಮಾಡುತ್ತಿರುವ ಚಟವನ್ನು ಒಮ್ಮೆ ವಿಮರ್ಶಿಸಬೇಕಾಗಿ ಬಂದಿತು. ದಾರಿಯಲ್ಲಿ ಉತ್ತಮರೆನಿಸುವವರ ಮಕ್ಕಳು ಇದಿರಾದರೆ, ನನ್ನ ಕೈ ಅವರ ಗಲ್ಲಕ್ಕೆ ನೇರವಾಗಿ ಹೋಗುತ್ತಿತ್ತು. ಹರಿಜನರ ಮಕ್ಕಳು ಇದಿರಾದಾಗ, ಮುಂದೆ ಹೋದ ಕೈಯು ಹಿಂದಕ್ಕೆ ಸರಿಯುತ್ತಿತ್ತು. ನನ್ನ ಮನಸ್ಸು ನನ್ನ ರೀತಿಯನ್ನು ಒಪ್ಪಿದ್ದರೂ, ಹಿಂದಿನ ಸಂಪ್ರದಾಯದಿಂದ ನನ್ನ ನರಗಳು, ಹೊಲೆಯರ ಮಕ್ಕಳನ್ನು ಮುಟ್ಟಲು ಹಿಂಜರಿಯುತ್ತಿದ್ದುವು. ಇನ್ನೊಮ್ಮೆ-ಅಸ್ಪೃಶ್ಯ ಬಾಲಕನೊಬ್ಬ ಒಂದು ಜಗುಲಿಯಿಂದ ಕೆಳಕ್ಕೆ ಬಿದ್ದಾಗ, ಅವನ ಸಹಾಯಕ್ಕೋಡಿದ ನನಗೆ, ಇದೇ ಬಗೆಯ ಸಂಕೋಚ ಆದುದುಂಟು. ನಮ್ಮ ಆವರಣದಿಂದ ನಮ್ಮ ವಿಚಾರ ಶಕ್ತಿ, ನಡವಳಿಕೆಗಳು, ದಾಸ್ಯಕ್ಕಿಳಿಯುವುದರ ಉದಾಹರಣೆಯಿದು.

### ನಮ್ಮದು ನಮಗೆ ಕಾಣಿಸದು

ನಾನು ನಂಬಿ ಬಂದ ದೇವರು—ನಾಲ್ಕು ವರ್ಣದವರನ್ನು ಹಿರಿದಾಗಿ ಮಾಡಿ, ಉಳಿದವರ ಕಡೆಗೆ ಉದಾಸೀನವಾದ ಸಂಸ್ಕೃತಿಯ ಫಲವಿದು. ಈ ಬಗೆಯ ಸಂಕುಚಿತ ದೃಷ್ಟಿಯು ತೀರ ಸ್ವಾಭಾವಿಕವಾಗಿ ಜನತೆಗೆ ಬಂದು ಬಿಡುತ್ತದೆ. ಅದನ್ನು ಮುರಿಯುವುದೇ ಅವರಿಗೆ ಪಾಪವೆನಿಸುತ್ತದೆ. ಶ್ವೇತ ಜನರು ವರ್ಣ ಜನಾಂಗಗಳ ಕಡೆಗೆ ತೋರುವ ತಾತ್ಸಾರಕ್ಕೂ ಇದೇ ಕಾರಣ. ಬಿಳಿಯರು ಶ್ರೇಷ್ಠರೆಂಬ ಭಾವನೆಯು ಅವರ ನಾಗರಿಕತೆಯಲ್ಲಿ ಪರಂಪರೆಯಿಂದ ಬಂದಿದೆ. ಬರ್ಮಾ ಯುದ್ಧದ ಸೋಲಿನ ಗಳಿಗೆಯಲ್ಲಿ, ಅವರು ಕರಿಯರು ಸಂಚರಿಸುತ್ತಿದ್ದ ದಾರಿಯಿಂದ ಓಡಿಹೋಗಲು ಅಸಮರ್ಥರಾದರು. ಶ್ವೇತಪಿತ್ಥ ಅಡರಿದ ಒಬ್ಬ ವ್ಯಕ್ತಿಯು, ಕರಿಯನೊಬ್ಬನೊಡನೆ ಮನಶ್ಶಾಂತಿಯಿಂದ ಉಣ್ಣಬಲ್ಲನೇ? ಬ್ರಾಹ್ಮಣನ ಬಳಿಯಲ್ಲಿ ಹೊಲೆಯನೊಬ್ಬ ಕುಳಿತರೆ, ಅವನ ಗಂಟಲಿಂದ ತುತ್ತು ಸರಾಗವಾಗಿ ಇಳಿದೀತೆ? ಅವರವರು ಬೆಳೆದ ಆವರಣಗಳು–ಅಂದರೆ ಸಂಸ್ಕಾರ, ಸಂಪ್ರದಾಯಗಳು, ಅವರವರ ನಡವಳಿಕೆಯ ವಿಚಾರದಲ್ಲಿ ಅಂಧತೆಯನ್ನು ತಂದುಬಿಡುತ್ತವೆ. ಉಳಿದವರಲ್ಲಿನ ದೋಷ ನಮಗೆ ಕಾಣುವಷ್ಟು ಸೊಗಸಾಗಿ, ನಮ್ಮಲ್ಲಿನ ಕೊರತೆಗಳು ಕಾಣಿಸವು.

ನಮ್ಮ ನಂಬಿಕೆಗಳನ್ನು ನಾವು ವಿವೇಚಿಸಲು ಹೋಗುವುದೇ ಇಲ್ಲ. ಜೀವನದ ಯಾವ ಪ್ರಶ್ನೆಯನ್ನೇ ಆಗಲಿ, ಯೋಚಿಸಲು ಬಯಸುವ ವ್ಯಕ್ತಿಗೆ, ಇಂಥ ತಡೆ ಸಲ್ಲದು. ಅವನ ಪಂಗಡದ ಹಿರಿತನ, ಅವನ ಕುಲದ ಹಿರಿತನ, ಅವನ ಮಾನವತೆಯ ಹಿರಿತನ—ಇವೆಲ್ಲವನ್ನೂ ಅವನು ಮರೆಯಬೇಕಾಗುತ್ತದೆ. ಹೀಗೆ ಮರೆಯಲು ಅವಕಾಶಕೊಡದುವೇ—ಸಂಪ್ರದಾಯ, ಸಂಸ್ಕೃತಿ, ರೂಢಿ, ಮತ, ಧರ್ಮಗಳಂಥವು. ಇವುಗಳಿಂದ ಉಂಟಾದ ನಂಬುಗೆ ಗಳಿಗೆ ಒಬ್ಬ ಬಲಿಯಾಗಿರುವಷ್ಟು ದಿನ, ಅವನು ತಾನೇ ತಾನಾಗಲಾರ. ಅವನ ದೃಷ್ಟಿ ಕುರುಡೋ, ಅರೆಕುರುಡೋ ಆಗುತ್ತದೆ. ನಮ್ಮಿಂದ ಇತರ ಜನಗಳಿಗೆ ಕೆಡುಕು ಆಗುತ್ತಿದ್ದರೂ, ಅದನ್ನು ಕಾಣುವ ಕಣ್ಣು ನಮಗೆ ಬರ ದಾಗುತ್ತದೆ.

ಈ ಕಾರಣಗಳಿಂದಾಗಿ, ನಮ್ಮ ನಂಬಿಕೆಗಳು ಎಷ್ಟೇ ಪುರಾತನವಾಗಿ ರಲಿ, ಅವು ಶಾಸ್ತ್ರ ಸಮ್ಮತವಾಗಿರಲಿ, ಋಷಿ ಉಕ್ತವಾಗಿರಲಿ—ನಿಷ್ಪಕ್ಷ ಪಾತದ ಮನಸ್ಸಿನಿಂದ, ಪೂರ್ವತೀರ್ಮಾನಗಳ ಬಂಧನವಿಲ್ಲದೆ ನಾವು ಅವನ್ನು ತೂಗಿದಲ್ಲದೆ—ಜೀವನವನ್ನು ಕುರಿತಾದ ಸರಳ ದೃಷ್ಟಿ ನಮಗೆ ಬರಲಾರದು.

### ಸತ್ಯಾನ್ವೇಷಣೆಯ ಅಧಿಕಾರ

ಹೀಗೆಂದೊಡನೆಯೆ-ಹಿರಿಯರು ಕಂಡಿರದ ಸತ್ಯ ನಿನಗೇನು ದೊರ ಕೀತು? ಋಷಿಗಳು ತಿಳಿಯದ್ದು ನಿನಗೇನು ತಿಳಿದೀತು-ಎಂಬವರುಂಟು. ಇದಕ್ಕೆ ಎರಡೇ ಸಮಾಧಾನದ ಮಾತುಗಳು. ಸತ್ಯ ತಿಳಿಯುವ ಹಂಬಲ, ಹಕ್ಕು, ಜೀವನದ ಅರ್ಥಮಾಡಿಕೊಳ್ಳುವ ಇಚ್ಛೆ, ಹಕ್ಕು ಯಾರೊಬ್ಬರಿಗೂ ಮೀಸಲಾಗಿಲ್ಲ. ಕೇವಲ ಋಷಿಗಳಿಗೂ ಮೀಸಲಲ್ಲ; ಬಾಳಲು ಬಯಸುವ ಪ್ರತಿಯೊಂದು ಪ್ರಾಣಿಗಿರುವ ಹಕ್ಕು ಅದು. ನಮಗೆ ತಿಳಿಯುವ ಇಲ್ಲವೆ ತಿಳಿ ಯದಿರುವ ವಿಚಾರ—ಅನ್ಯರಿಗೆ ತಿಳಿದಿದ್ದರೂ ಅದು ನಮಗೆ ತಿಳಿದಂತಲ್ಲ; ಅನ್ಯರು ಉಂಡುದರಿಂದ ನಮ್ಮ ಹಸಿವು ಹೋಗದು. ಅವರವರ ಜೀವನದ ತಿಳಿವು ಅವರವರಿಂದಲೇ ಬೆಳೆಯತಕ್ಕದ್ದು. ಪರರ ಹೇಳಿಕೆಗಳು ಈ ವಿಷಯ ದಲ್ಲಿ ನಿರಾಕರಣೆಗೆ ತಕ್ಕವೆಂದಲ್ಲ; ಸ್ವೀಕಾರಕ್ಕೆ ಮೊದಲು ತುಲನೆಗೆ ತಕ್ಕುವು-ಎಂಬುದೇ ಈ ಮಾತಿನ ತಾತ್ಪರ್ಯ.

ನನ್ನ ಸಂಸ್ಕೃತಿಯು ನನಗಿತ್ತ ನಂಬಿಕೆಗಳು ಹೇಗೆ ಕ್ರಮಗತವಾಗಿ

ನನ್ನ ಮನಸ್ಸನ್ನು ತಣಿಸಲಾರದೆ ಹೋದುವೆಂದೂ, ನಾನು ಬಾಳನ್ನು ಅರಿಯಲು ಹೇಗೆ ದುಡಿಯಬೇಕಾಗಿ ಬಂತೆಂಬುದನ್ನೂ ಹೇಳುತ್ತೇನೆ.

**ಆರ್ಯರ ಮಿತಿ**

ನಮಗೆ ಇತಿಹಾಸದಲ್ಲಿ ವಿಶ್ವಾಸ ಬರತೊಡಗಿದಂತೆ, ಆರ್ಯರಿಂದ ಬಂದ ಧರ್ಮವನ್ನೇ ಅನುಮಾನಿಸುವ ಪ್ರಸಂಗವೊದಗಿತು. ಅನಾರ್ಯರಾದ ದ್ರಾವಿಡರು 'ಅಸುರ'ರೆನಿಸಬೇಕೇ? ಆರ್ಯನಿರ್ಮಿತ ಇಂದ್ರ, ವಿಷ್ಣುಗಳು ದ್ರಾವಿಡ ಜನಗಳನ್ನು ದಂಡಿಸಲು ಹೊರಡಬೇಕೆ? ಆರ್ಯರಿಗೆ ನೆರವಾದ ಕಿಷ್ಕಿಂಧೆಯ ಜನರಿಗೆ ಸರಿಯಾದ ಮಾನ ದೊರೆಯಿತೇ? ಆರ್ಯರ ದೃಷ್ಟಿಯಲ್ಲಿ ಅವರಿಗೆ "ಕಪಿ" ಸ್ಥಾನಕ್ಕಿಂತ ಹೆಚ್ಚಿನ ಮನ್ನಣೆ ದೊರೆಯದೆ ಹೋಯಿತೇಕೆ?–ಎಂಬ ಪ್ರಶ್ನೆಗಳು ಉದ್ಭವಿಸಿದುವು. ಇವನ್ನು ನೆನೆದರೆ–ಆರ್ಯರು ಬೆಳೆದ ಆವರಣ, ಅವರ ಮಾನವತೆಯ (humanity) ಕಲ್ಪನೆಗೆ ಎಂಥ ಮಿತಿ ತಂದಿಕ್ಕಿತೆಂದು ಸ್ಪಷ್ಟವಾಗುತ್ತದೆ. ಇಂದಿನ ದಿನದಲ್ಲಿ ನಾವು ಆಫ್ರಿಕ ದೇಶವನ್ನು ನೋಡಿದರೆ, ಅದೇ ಚಿತ್ರ ಕಾಣಿಸುತ್ತದೆ. ಬಿಳಿಯರಿಗೆ ಅಲ್ಲಿ ರಾಜ್ಯ ಕಟ್ಟಲು ನೆರವಾದರು ಹಿಂದೀಯರು. ಆದರೆ ಅದೇ ಹಿಂದೀಯರಿಗೆ ಅಲ್ಲಿ ಸಮಾನ ಪ್ರಜಾಧಿಕಾರ ದೊರೆತಿಲ್ಲ. ಅದನ್ನು ಕೊಡದಿದ್ದುದು ಅಲ್ಲಿನ ಬಿಳಿಯರಿಗೆ, ತಪ್ಪಾಗಿಯೂ ಕಾಣಿಸುವುದಿಲ್ಲ. ತಾವು ಶ್ರೇಷ್ಠರು ಎಂಬ ಭ್ರಮೆ ಅವರಿಗೆ ರೂಢಿಯಿಂದ ಬಂದು ಬಿಟ್ಟಿದೆ.

ಇನ್ನು, ಒಂದೇ ಧರ್ಮದೊಳಗಿನ ಪಕ್ಷಪಾತಗಳಿಗೂ ಇಂಥ ಮನೋವೃತ್ತಿಯು ಕಾರಣವಾಗುತ್ತದೆ. ಆರ್ಯರಲ್ಲಿನ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನು ಶ್ರೇಷ್ಠನೆನಿಸಿದ್ದಾನೆ. ದೈವೀ ಗುಣಗಳು ಅವನಿಗೆ ಮೀಸಲಾದುವು; ಆತ ಭೂಸುರ ಎನಿಸಿದ. ಈ ಬಗೆಯಿಂದ ಜನ ತಮ್ಮ ಹಿರಿಮೆಯನ್ನು ಕಾಯುವ ಪರಂಪರೆಯು, ಎಲ್ಲೆಲ್ಲೂ ಇದೆ. ಪೋಪರು, ಪಾದ್ರಿಗಳು–ಕ್ರಿಸ್ತೀಯರ ಆತ್ಮದ ಮೇಲಿನ ಅಧಿಕಾರಿಗಳಾಗಿದ್ದಾರೆ! ಮುಲ್ಲಾರು ಬೇರೊಂದು ಕಡೆಯಲ್ಲಿ ಈ ಕೆಲಸ ಮಾಡುತ್ತಾರೆ. ಅನೇಕ ಮೂಲನಿವಾಸಿಗಳಲ್ಲಿ ಪುರೋಹಿತನೇ ಇಹದ ದೈವವೆನಿಸುತ್ತಾನೆ. ರಾಜಕೀಯದಲ್ಲೂ ಇದೇ ನೀತಿ ನಡೆಯುತ್ತಿದೆ. ಧನಸತ್ತೆಯು ರೂಢವಾಗಿ ಬಂದಿರುವ ಜನರಲ್ಲಿ, ಅದು ಅನ್ಯಾಯಕ್ಕೆ ಕಾರಣವಾದೀತೆಂದು ತೋರುವುದಿಲ್ಲ. ಜಡಜನರ ವ್ಯಥೆಗೆ ಅದು ಕಾರಣವಾದೀತೆಂದು ಅನಿಸುವುದಿಲ್ಲ. ಅವರವರ ಕರ್ಮಗಳಿಂದ ಬಡವರು, ಶ್ರೀಮಂತರಾಗಿ

ಹುಟ್ಟುತ್ತಾರೆ ಎಂಬ ನಂಬಿಕೆ ಈ ಅನ್ಯಾಯವನ್ನು ಮುಂದುವರಿಸುತ್ತದೆ. ರಸ್ಯಾ ದೇಶ ಹೇಗೆ ಇದನ್ನು ಬದಲಿಸಿತು? ಅಲ್ಲಿನ ಈಗಿನ ಅರ್ಥಿಕ ಸಮತೆಗೆ, ಕರ್ಮ ಸಿದ್ಧಾಂತದಂತೆ ವಾದಿಸುವಲ್ಲಿ, ಆ ಒಂದು ದೇಶದಲ್ಲಿ ೧೯೨೧ನೇ ಇಸವಿಯಿಂದ ಸಮಕರ್ಮಿಗಳೂ, ಸಮಪುಣ್ಯಶಾಲಿಗಳೂ ಮಾತ್ರ ಹುಟ್ಟು ತ್ತಿದ್ದಾರೆನ್ನಬೇಕೆ?

### ಜೀವ ಕುಟುಂಬದ ಕರ್ಮಫಲ

ರಸ್ಯ ದೇಶದ ಆರ್ಥಿಕ ಕ್ರಾಂತಿಯೆಂಬುದು ಇನ್ನೊಂದು ಪ್ರಶ್ನೆಯನ್ನೂ ಕೆರಳಿಸುತ್ತದೆ. ಸಮಾಜದಲ್ಲಿ ನಂಬಿಕೆಗಳು ಬಲವಂತವಾಗಿರುವಾಗ, ಒಬ್ಬೊ ಬ್ಬನ ಕರ್ಮವು ಫಲಿಸೀತೇ–ಎಂದು? ಅಲ್ಲಿನ ಇಂದಿನ ಆರ್ಥಿಕ ಸಮತೆಯು ಏತರಿಂದಾಯಿತು? ವ್ಯಕ್ತಿಗಳ ಪಾಪ ಪರಿಪಾಕ ಕಡಿಮೆಯಾಗಿ ಎಲ್ಲರಿಗೂ ಊಟಕ್ಕೆ ಅನ್ನ ಸಿಗುತ್ತಿದೆ ಎನ್ನಬೇಕೆ? ಇಡಿಯ ಸಮಾಜ ಕ್ರಾಂತಿಗೆ ಗುರಿ ಯಾದುದರಿಂದಲೇ ಈ ಕೆಲಸ ಸಾಧ್ಯವಾಯಿತು. ಇದರಿಂದ ವ್ಯಕ್ತಿ ತನ್ನ ಕರ್ಮಕ್ಕೆ ಹೊಣೆಯೆನ್ನುವುದರ ಬದಲು, ಜೀವಕುಟುಂಬದ ಒಟ್ಟು ಕರ್ಮ, ಜೀವ ಅದರ ಒಟ್ಟು ಸುಖದುಃಖಗಳಿಗೆ ಕಾರಣ—ಎನ್ನುವುದು ಲೇಸು.

ವ್ಯಕ್ತಿಯ ಜೀವನವನ್ನು ಪರಿಶೀಸುವಂತೆ, ಅವನು ತನ್ನ ಆವರಣಕ್ಕೂ, ಪೂರ್ವಪರಂಪರೆಗೂ ಎಷ್ಟೊಂದು ಬಲಿಯಾಗುತ್ತಾನೆ–ಎಂದು ತಿಳಿಯದೆ, ಕರ್ಮಫಲದ ಕೇವಲ ವ್ಯಕ್ತಿಗತವಾದದ್ದಲ್ಲವೆಂದೂ ಸಾಮೂಹಿಕವಾದ ದ್ದೆಂದೂ ತಿಳಿಯಬೇಕಾಗಿದೆ.

### ರೂಢಿಯ ದೃಷ್ಟಿ ಬೇಡ

ಹಲವು ಮತಗಳು ಬದುಕನ್ನು ಕುರಿತು ಹುಟ್ಟಿಸಿದ ತೀರ್ಮಾನಗಳ ವಿಚಾರ ಮಾಡುವ. ಬದುಕೊಂದು ಮಾಯೆ, ಬರಬಾರದಾದ ಜನ್ಮ–ಎಂಬ ಪೂರ್ವತೀರ್ಮಾನ ಅದು. ಅದರಿಂದ, ಜೀವನವನ್ನು ಬದುಕಿ ತಿಳಿಯಬೇಕೇ? ಬದಲು ನಿರಾಕರಿಸಿ ಬಾಳಬೇಕೇ–ಎಂಬ ಪ್ರಶ್ನೆ ಹೊರಡುತ್ತದೆ. ಇಲ್ಲಿನ ಸುಖ ವಿರಲಿ ದುಃಖವಿರಲಿ, ಅವನ್ನು ಬಾಳಿ ತಿಳಿಯುವ ಬದಲು, ಮುಕ್ತಿಗಾಗಿ ಬಾಳನ್ನು ಮೀಸಲಾಗಿ ಇರಿಸುವುದು ಸಮವೇ?

ಇಂಥ ಹಲವೊಂದು ಒಡಪುಗಳು ನಮ್ಮ ಕಣ್ಮುಂದೆ ಬಂದು ನಿಲ್ಲು ತ್ತವೆ. ರೂಢಿಯಿಂದ ನಾವು ಅವನ್ನು ಒಪ್ಪಿಬಿಡುವಲ್ಲಿ, ನಮಗೆ ಬೇರಾವ ಹೊಸ ನೋಟವೂ ಶಕ್ಯವಿಲ್ಲ. ಹಳೆಯ ಯೋಚನೆಗಳ ಬಲೆಯಿಂದ ನಾವು

ಪಾರಾಗುವಂತಿಲ್ಲ. ಅವಿರುವಷ್ಟು ಕಾಲ, ನಮ್ಮ ಬದುಕನ್ನು ನಾವು ತಿಳಿದು ಬಾಳುವ ಹವ್ಯಾಸ ಸಾಧ್ಯವಾಗದು. ನಮ್ಮ ಬದುಕಿಗೊಂದು ವ್ಯಕ್ತಿತ್ವವೂ ಉಳಿಯುವುದಿಲ್ಲ. ಅದರ ಅವಶ್ಯಕತೆಯೂ ಅನಿಸದಂತಾಗುತ್ತದೆ. ತೀರ ಅಸಹಾಯಕವಾದ ಸುಳಿಯಲ್ಲಿ ಸಿಲುಕಿದ ವ್ಯಕ್ತಿ, ಪ್ರತ್ಯೇಕವಾದ ಆತ್ಮವಿದೆ, ಎನ್ನುವುದರಿಂದ ಬರುವುದಾದರೂ ಏನು?

**ಆವರಣದ ಮಿತಿ**

ನಾವು ಎಲ್ಲವನ್ನು ತಿರುಗಿ ಯೋಚಿಸಬೇಕು, ವಿಮರ್ಶಿಸಬೇಕು, ಪೂರ್ವಸಿದ್ಧಾಂತಗಳ ತೀರ್ಮಾನಕ್ಕೆ ಬಲಿಯಾಗಬಾರದು-ಎಂದೊಡನೆ ರೂಢಿಯಿಂದ ಬಂದ ಮತ, ಪುರಾಣಗಳ ಸೆರಗನ್ನು ಹೇಗೆ ಕಡಿದುಕೊಳ್ಳಬೇಕೋ, ಹಾಗೇನೇ ನಮ್ಮ ಭೂಗೋಲಿಕ ಆವರಣವನ್ನೂ ಕಡಿಯಬೇಕಾಗುತ್ತದೆ. ಒಂದೊಂದು ಮತವು ಎಷ್ಟೇ ಉದಾತ್ತವಾದ ದೃಷ್ಟಿಯಿಂದ ಹುಟ್ಟಿರಲಿ —ಅದು ಹುಟ್ಟಿದ ಕಾಲದ, ಆಯಾ ಪ್ರವಾದಿಗಳ ಕಾಲದ ಮಿತಿಯನ್ನೂ, ಭೌಗೋಲಿಕ ಆವರಣಗಳ ಮಿತಿಯನ್ನೂ ತಾಳಿವೆಯೆಂಬುದು ಸ್ಪಷ್ಟವಾದ ವಿಷಯ.

ಮೋಸೆಸನು ಯಹೂದಿಯರ ರಾಜ್ಯದ ಮೇರೆಯನ್ನು ದಾಟಲಿಲ್ಲ; ಜರತುಷ್ಟ್ರನಿಗೆ ಇರಾಣ, ಬೆಬಿಲಾನುಗಳೇ ಗಡಿನಾಡೆನಿಸಿದುವು. ನಮ್ಮ ಹಿಂದೂ ಧರ್ಮದ ದೇವತೆಗಳು ಭರತಖಂಡವನ್ನು ದಾಟಿ ಹೋಗಲಿಲ್ಲ.

ದೇವರ ಕಲ್ಪನೆಯು ಜೀವಕೋಟಿಯ ಉದ್ಧಾರಕ್ಕೆ ಅವಶ್ಯ ಎನ್ನುವುದಾದರೆ, ಆ ದೇವರ ಕಲಾಪ ಜೀವಕೋಟಿ ವಾಸಿಸುವವ ಎಲ್ಲ ಭೂಮಿಗಳಿಗೂ ಅನ್ವಯಿಸಬೇಕು. ಮಾನವ ಕೋಟಿಯ ಉದ್ಧಾರಕ್ಕಾಗಿ ಜನಿಸುವ ದೇವರು, ಹಿಂದುಸ್ಥಾನವನ್ನು ಧರ್ಮಕ್ಷೇತ್ರವಾಗಿ ಮಾಡಿಕೊಳ್ಳಬಹುದೇ? ವಿಷ್ಣು, ಶಿವರ ಅವತಾರಗಳು ನಮ್ಮ ನಾಡಿನ ಗಡಿಯೊಳಗೇ ಆಗಬೇಕಾದ ಕಾರಣವೇನು? ಹೊರಗಿನ ಜನತೆ ದೇವರ ದೃಷ್ಟಿಯಲ್ಲಿಲ್ಲವೆಂದೇ? ಅಥವಾ ಅವರಲ್ಲಿ ದುರ್ಜನರು ಜನಿಸಲೇ ಇಲ್ಲವೆಂದೇ? ಬಾಯಲ್ಲಿ 'ದೇವರು ವಿಶ್ವವ್ಯಾಪಿ'ಯೆಂದರೇನು? ನಮ್ಮ ಪುರಾಣಗಳ ವಿಶ್ವವೂ, ದೇವರ ವ್ಯಾಪಾರಗಳೂ ಜಂಬೂದ್ವೀಪದೊಳಗಣ ಭರತಖಂಡಕ್ಕೊ, ಆರ್ಯಾವರ್ತಕ್ಕೊ ಮಾತ್ರ ಅನ್ವಯಿಸಿದರೆ ಹೇಗೆ? ಯಹೂದ್ಯರ ದೇವರು ಏಸ್ಯಾಮೈನರಿನಲ್ಲಿ, ಕಾಫಿರರ ದೇವರು ಕಾಫಿರಸ್ಥಾನದಲ್ಲ, ಸಮೋವನರ ದೇವರು ಸಮೋವ

ದ್ವೀಪಗಳಲ್ಲಿ ಹುಟ್ಟಿ ನಲಿದರೆಂದರೆ—ಭೂಗೋಲದ ಈ ಮೇರೆ ದೈವದ ಚಟುವಟಿಕೆಗೂ ಅನ್ವಯಿಸಿದಂತಾಗಲಿಲ್ಲವೇ?

ಮಾನವನು ಕಟ್ಟಿಕೊಂಡ ದೇವರುಗಳ ರಾಜ್ಯಭಾರ ಹೀಗಿದೆ. ಮತ, ಧರ್ಮಗಳು ಹುಟ್ಟಿದ ನಾಡಿನ ಮೇರೆಯಿಂದ ಅವು ಮಿತಗೊಂಡದ್ದು ಮಾತ್ರವಲ್ಲ, ಆ ದೇವರುಗಳ ಕಾರ್ಯಕ್ರಮ ಮನುಷ್ಯ ಪ್ರಪಂಚದ ಸಂಕುಚಿತ ಕ್ಷೇತ್ರಕ್ಕೇ ಅನ್ವಯಗೊಂಡಿತು. ಎಲ್ಲ ಜೀವಕೋಟಿಗಳ ದಾತನು, ಬರಿಯ ಮನುಷ್ಯರ ಉದ್ಧಾರಕ್ಕೇ ಅವತರಿಸಬೇಕೇ? ಐಗುಪ್ತರಿಂದ ಇಸ್ರೇಯುಲರನ್ನು ಕಾಯುವುದಕ್ಕೆ, ತುರಾನಿಯರಿಂದ ಇರಾನಿಯನರನ್ನು ಉಳಿಸುವುದಕ್ಕೆ, ಅಸುರರಿಂದ ವಿಪ್ರರನ್ನು ಉಳಿಸುವುದಕ್ಕೇ ದೇವರಾದರೆ — ಪಶುಪಕ್ಷಿಗಳನ್ನು ಕಾಯುವವರಾರು? ಹುಲಿಗಳಿಂದ ದನಗಳನ್ನು ಕಾಯುವ ದೇವರು, ಹಿರಿಮೀನುಗಳಿಂದ ಕಿರಿಮೀನುಗಳನ್ನು ಉಳಿಸುವ ದೇವರು, ಅದೇ ತೆರನಲ್ಲಿ ಇರಬೇಡವೇ?

**ತನ್ನ ಮಿತಿ ದೇವರಿಗೆ**

ಮನುಷ್ಯ, ದೇವರನ್ನು ಬಾಯಿಮಾತಿನಲ್ಲಿ ಎಷ್ಟೇ ದೊಡ್ಡವನೆಂದು ತಿಳಿಯಲು ಯತ್ನಿಸಿದರೂ, ಅವನು ಕೇವಲ ತನ್ನ ನೆಲ, ತನ್ನ ಜನ ಇವುಗಳ ಸ್ವಾರ್ಥದ ಮೇರೆಯಿಂದ ದಾಟಲಾರನಾದಾನು. ಇಷ್ಟೊಂದು ಸಂಕುಚಿತ ಆವರಣದಲ್ಲಿ ಜನಿಸಿದ ದೇವರುಗಳು ವಿಶ್ವದ ಹೊಣೆ, ಜಗತ್ತಿನ ಉದ್ಧಾರ ಮಾಡಲು ಅಸಮರ್ಥರಾದಾನೆಂದೇ ತಿಳಿಯಬೇಕು. ನಮ್ಮ ದೈವತ್ವದ ಕಲ್ಪನೆ ಬಹುವಾಗಿ ಹಿಗ್ಗಿದಲ್ಲದೆ, ವಿಶ್ವದ ವಿಚಾರವೋ, ವಿಶ್ವದಲ್ಲಿ ಜೀವಿಸುವ ಯಾವತ್ತು ಜೀವಿಗಳ ವಿಚಾರವೋ ನಮಗೆ ಅರ್ಥವಾಗದು. ಬದುಕಿನ ಅರ್ಥವನ್ನು ತಿಳಿಯಲೆತ್ನಿಸುವವನು, ತಾನು ಮಾನವನಾದ ಮಾತ್ರಕ್ಕೆ, ತನ್ನನ್ನು ಬೇರೆಯಾಗಿ ಆಯ್ದು, ತನ್ನ ಕುಟುಂಬವನ್ನು ಆರಿಸಿದ ಜನವರ್ಗವಾಗಿ ಇರಿಸಿಕೊಂಡು ಮಾಡುವ ತೀರ್ಮಾನಗಳಿಂದ, ಜೀವನದ ಉದ್ದೇಶವನ್ನು ತಿಳಿಯಲಾರ. ಅದರಿಂದ ಅವನು ಮಾಡುವ ತೀರ್ಮಾನಗಳು—ಆತನ ಅನುಕೂಲ, ಪ್ರತಿಕೂಲತೆಗಳ ನೆಳಲನ್ನು ಮಾತ್ರ ಕೆಡೆಯಬಹುದು.

**ಸಾಂಪ್ರದಾಯಿಕ ದೇವರು**

ಈ ಕಾರಣಗಳಿಂದಲೂ, ಸಂಪ್ರದಾಯದ ದೇವರು ನಮ್ಮ ಜ್ಞಾನವನ್ನು ಅರಳಿಸುವ ಬದಲು ಮುದುರಿಸುತ್ತಾನೆಂದೇ ಅನಿಸುತ್ತದೆ. ಬಾಳ್ವೆಯ

ಅರ್ಥವನ್ನು ತಿಳಿಯಬಯಸುವ ವಕ್ತಿ, ದೇವರಗೊಂದಲ ಹಚ್ಚಿಕೊಳ್ಳದಿದ್ದರೂ ತೊಡಕಾಗಬೇಕಿಲ್ಲ; ಹಚ್ಚಿಕೊಳ್ಳುವುದಾದರೆ ಆ ದೇವರು ಎಲ್ಲ ವಿಧಗಳಿಂದಲೂ—ಅಂದರೆ ಅವತಾರ, ಕಟ್ಟುನಿಟ್ಟು, ಪಾಲನೆ, ನಾಶ—ಎಲ್ಲವುಗಳ ವಿಷಯದಲ್ಲೂ, ವಿಶ್ವವನ್ನೂ ವಿಶ್ವದ ಜೀವಕೋಟಿಯನ್ನೂ ಆಳವಡಿಸುವವನಾಗಬೇಕು.



# ೩ ನಮ್ಮ ಅಳತೆಯನ್ನು ಮೀರದ ದೇವರು

**ದೇವರ ಬೆಲೆ**

ಎಲ್ಲ ಸಂಪ್ರದಾಯವಾದಿಗಳಂತೆ ನಾನೂ ಒಮ್ಮೆ ಬದುಕಿನ ಬೆಲೆಯನ್ನು ತಗ್ಗಿಸಿ ದೇವರ ಬೆಲೆಯನ್ನು ಏರಿಸಿ ತಿಳಿದವನು. ಕೊನೆಗೆ ನನ್ನ ಅನುಭವಗಳು, ಈ ನನ್ನ ರೂಢಿಯ ನಂಬಿಕೆಗಳನ್ನು ಕುಲುಕಿಸುವ ಕಾಲ ಬಂದಿತು. ನಮ್ಮ ಬದುಕಿಗಿಂತ ಹಿರಿದಾದ ದೇವರು ನಮಗೆ ನಿಲುಕಲಾರನೆಂಬುದೇ ನನ್ನ ನಂಬಿಕೆ. ಈ ನಿರ್ಣಯಕ್ಕೆ ಕಾರಣವಾದ ವಿಚಾರಸರಣಿಯನ್ನು ಮುಂದಿಡುತ್ತೇನೆ. ಮೊದಲಿಗೇನೆ—ನಾನು ಸಾಂಪ್ರದಾಯವಾದಿಗಳ ಕುಟುಂಬದಲ್ಲಿ ಜನಿಸಿದವನು-ಎಂದೆ. ನಮ್ಮ ಮನೆಯವರು ಸ್ಮಾರ್ತ ಬ್ರಾಹ್ಮಣರು. ಅದ್ವೈತಿಗಳಂತೆ ನಾವು ವಿಭೂತಿ ಧರಿಸುವವರು. ಇತ್ತ ಶಿವನೂಲ್ಲೂ ಭಕ್ತಿಯಿದೆ ಅತ್ತ ವಿಷ್ಣುವಿನಲ್ಲೂ ಭಕ್ತಿಯಿದೆ. ಶಿವರಾತ್ರಿಗೂ ಉಪವಾಸ, ಕೃಷ್ಣಾಷ್ಟಮಿಗೂ ಉಪವಾಸ. ನಮಗೆ ಕುಲದೇವರು ವಿಷ್ಣುವಿನ ಒಂದು ರೂಪ-ಲಕ್ಷ್ಮೀನರಸಿಂಹ. ಹೆಸರಿಗೇನೋ ನಾವು ಅದ್ವೈತಿಗಳು. ಆದರೆ ಅವರಂತೆ ಜ್ಞಾನಪ್ರಧಾನವಾದ ತರ್ಕ ಸರಣಿ ನಮ್ಮವರದ್ದಲ್ಲ. ದೇವರನ್ನು ಕಾಣುವ ನಮ್ಮ ಬಗೆ ಭಕ್ತಿ ಮಾರ್ಗದ್ದು. ಸೋಽಹಂ-ಬ್ರಹ್ಮನೆಂಬ ದಿಟ್ಟತನ ನಮ್ಮ ಜನಗಳಲ್ಲಿ ಬೆಳೆದು ಬಂದುದೇ ಕಾಣುವುದಿಲ್ಲ.

**ಗಾಂಧಿ, ರಾಮಕೃಷ್ಣರು**

ನನ್ನ ಹುಡುಗತನದಲ್ಲಿ ಮತದ ಇಲ್ಲವೆ ಭಕ್ತಿಯ ಯಾವ ವರ್ಚಸ್ಸೂ ನನ್ನ ಮೇಲಿರಲಿಲ್ಲ. ಎಲ್ಲ ಶಾಲೆಯ ಹುಡುಗರಂತೆ ನಾನೂ ಒಬ್ಬ. ಮುಂದೆ ತಾರುಣ್ಯದ ಎಳೆತನದಲ್ಲಿ ಕಾಲೇಜನ್ನು ಬಿಡುವ ಕಾಲ ಬಂದಿತು. ಗಾಂಧಿಜೀಯವರ ರಾಜಕೀಯ ಕರೆ ಅದಕ್ಕೆ ಕಾರಣವಾಯಿತು. ಆ ಕರೆಯು ಒಲ ರಾಜಕೀಯದ್ದಾಗಿದ್ದರೂ, ಅವರ ಆದರ್ಶಗಳ ವರ್ಚಸ್ಸು ನನ್ನ ಮೇಲೆ ಬಿದ್ದಿತ್ತು. ನನ್ನಲ್ಲಿ ಭಕ್ತಿಯ ಸುಳಿವು ಬಲವಾಗಿತ್ತು. ಅದರಿಂದ ಗೀತೆಯ ಅಧ್ಯಯನ ನನಗೆ ಪ್ರಿಯವಾಗುತ್ತ ಬಂದಿತು. ಆ ಗೀತೆ ಎಷ್ಟು ಅರ್ಥವಾಯಿತೋ, ಅದರಿಂದೇನು ತಿಳಿಯಿತೋ ಹೇಳಲಾರೆ; ಅಂತು ಅದನ್ನು ಕನ್ನಡಿಸುವ, ಕಂಠಪಾಠಮಾಡುವ ಪ್ರಯತ್ನ ಮಾಡಿದ್ದೆ. ಇದೇ ವೇಳೆ

ಯಲ್ಲಿ ರಾಮಕೃಷ್ಣ ಪರಮಹಂಸರ ಬರವಣಿಗೆಗಳ ಮೇಲೆ ನನ್ನ ದೃಷ್ಟಿ ಹರಿಯಿತು. ಅವರ ಭಕ್ತಿ ಜೀವನ ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮ ಮಾಡಿತು. ಇತ್ತ ಗಾಂಧಿತನ, ಅತ್ತ ರಾಮಕೃಷ್ಣರ ವರ್ಚಸ್ಸು—ಇವುಗಳು ನನ್ನಲ್ಲಿದ್ದ ನಂಬುಗೆಗಳ ಮೇಲೆ ಬಿದ್ದುದರ ಪರಿಣಾಮವಾಗಿ 'ದೇವರನ್ನು ಕಾಣುವುದೇ ಮಾನವೀ ಜೀವನದ ಗುರಿಯೆಂದೂ, ಅದಕ್ಕೆ ಸಂಸಾರವು ವಿಘ್ನ ವೆಂದೂ, ಬ್ರಹ್ಮಚರ್ಯ ಜೀವನ, ಧ್ಯಾನ, ತಪಸ್ಸುಗಳು ಮುಖ್ಯ'ವೆಂದೂ ಒಮ್ಮೆಗೆ ನಿರ್ಣಯಿಸಿಬಿಟ್ಟೆ. ಇದು ನನ್ನ ತೀರ್ಮಾನವೆನ್ನುವ ಬದಲು, ನನ್ನ ಮನಸ್ಸು ತನ್ನ ಹಿಂದಿನ ರೂಢಿಯ ನಂಬಿಕೆಗಳಿಗೆ ಕೊಟ್ಟಿದ್ದ ಒಪ್ಪಿತವೆಂದರೂ ಸರಿಯೆ.

**ಹಲವು ದೇವರುಗಳು**

ಭಕ್ತಿ ಪಂಥದಲ್ಲಿ ಸವಿಯಿರುವ ನನಗೆ, ಯಾವ ದೇವರು ಬೇಕು? ಕುಲದೇವತೆಯಾದ ಲಕ್ಷ್ಮೀನರಸಿಂಹ ಮನಸ್ಸಿಗೆ ಎಂದೂ ಹಿಡಿದಿರಲಿಲ್ಲ. ಆ ಆ ಉಗ್ರ ರೂಪವಾಗಲಿ, ಲಕ್ಷ್ಮೀ ಸಂಜ್ಞಾರ್ಥವಾದ ಸಿರಿತನವಾಗಲಿ ನನಗೆ ಅಂದು ರುಚಿಸುವ ಸ್ಥಿತಿಯಲ್ಲಿರಲಿಲ್ಲ. ನಾನು ಶೈವನಾದರೂ ಶಿವನ ಯಾವುದೇ ರೂಪ, ಅವತಾರಗಳು ಮೋಹಕವಾಗಿ ಮನಸ್ಸಿನ ಮೇಲೆ ಮೂಡಿರಲಿಲ್ಲ. ನನ್ನ ಎಳೆತನದಲ್ಲಿ ಕೇಳಿದ ವಿಷ್ಣುವಿನ ಕತೆಗಳೇ ರಮಣೀಯವೆನಿಸಿದ್ದುವು. ಬಯಲಾಟಗಳಲ್ಲಿ ಬರುವ ರಾಮ, ಕೃಷ್ಣರು–ಮನಸ್ಸಿನ ಮೇಲೆ ಮುದ್ರೆ ಯೊತ್ತಿದ್ದರು. ಮೇಲೆ ನಮ್ಮ ಮನೆಯಲ್ಲಿ ಮಳೆಗಾಲದಲ್ಲಿ, ಭಾಗವತ ವಾಚನದ ಪರಿಪಾಠವಿರುತ್ತಿತ್ತು. ಹೀಗಾಗಿ ಕೃಷ್ಣನ ಕತೆಗಳು ಆಕರ್ಷಿಸಿದ್ದುವು. ಅದರಿಂದ ಮನಸ್ಸು ದೇವರನ್ನು ನೆನೆಯುವಾಗ ರಾಮ ಇಲ್ಲವೆ ಕೃಷ್ಣ–ಇವರಲ್ಲಿ ಒಬ್ಬರ ಕಲ್ಪನೆಯನ್ನು ತರುತ್ತಿತ್ತು. ಈ ವೇಳೆಯಲ್ಲೇ ಕೆಲವು ಸಾಮಾಜಿಕ ಪ್ರಶ್ನೆಗಳ ವಿಷಯದಲ್ಲಿ ನನ್ನಲ್ಲಿ ಕ್ರಾಂತಿಗಳು ತಲೆಯೆತ್ತಿದುದರ ಫಲವಾಗಿ ಏಕಾಗ್ರಚಿತ್ತತೆ ಬೆಳೆಸಲು ಪ್ರಾಣಾಯಾಮಸಾಧನ ಮಾಡಿದ್ದೆ; ಗಾಂಧಿಜೀಯವರ ಸಾಬರ್ಮತಿ ಆಶ್ರಮದಲ್ಲಿ ಕೆಲದಿನ ಇದ್ದುದರ ಫಲವಾಗಿ, ಅಲ್ಲಿನ ಭಜನೆಯ ರೀತಿ ಹಿತಕರವಾಗಿ ಕಂಡಿತ್ತು. ಆದರೂ ದೇವರನ್ನು ಗುಲ್ಲೆಬ್ಬಿಸಿ ಎಚ್ಚರಿಸುವ 'ಸಪ್ತಾಹ ಮಾರ್ಗ' ಎಂದೂ ನನಗೆ ರುಚಿಸಿರಲಿಲ್ಲ.

**ಧ್ಯಾನ, ಭಜನೆ**

ಇವೆರಡರ ಸಹಾಯದಿಂದ ನಾನು ದೇವರನ್ನು ಕುರಿತು ಚಿಂತಿಸಲು

ಕಲಿತೆ. ನಿರ್ಜನ ಮಸಣ, ಅರಣ್ಯಗಳಲ್ಲಿ ಅಲೆದಾಡುತ್ತ ಎಷ್ಟು ಮಿತ, ಶಾಂತ ಜೀವನ ಮಾಡಬಹುದೋ ಅದನ್ನು ಮಾಡುತ್ತ ಮಿತವಾದ ಅನ್ನಪಾನ, ಆಹಾರಗಳಿಂದ ಸಾಧನ ತೊಡಗಿದೆ. ಹತ್ತುವರ್ಷಗಳ ಕಾಲವಾದರೂ ನಾನು ಹೀಗೆ ಮಾಡಿದ್ದಿರಬೇಕು. ನನ್ನ ಬಹುಮಂದಿ ಗೆಳೆಯರಿಗೆ ಈ ನನ್ನ ಜೀವನ ಅಪರಿಚಿತವಾದುದು. ಏಕೆಂದರೆ-ಅಪರಿಚಿತ ಜನ, ನಾಡು, ನಗರಗಳಲ್ಲೇ ನಾನು ಈ ಕಾಲದಲ್ಲಿ ಬಹುವಾಗಿ ವಾಸಮಾಡುತ್ತಿದ್ದೆ. ಈ ಸಾಧನೆಯ ಪ್ರತಿಫಲವಾಗಿಯೇ ನನಗೆ ದೇವರ ಹುಚ್ಚು ಬಿಟ್ಟಿತು. ಅದರ ತೀರ್ಮಾನ ವನ್ನು ನನ್ನ ಗೆಳೆಯರ ಮುಂದಿರಿಸಿದಲ್ಲಿ, ನನ್ನ ಮುಂದಿನ ವಾದಸರಣಿ ಸ್ಪಷ್ಟ ವಾದೀತು.

## ಯಾವ ದೇವರು?

ತಾಸು ತಾಸುಗಳ ತನಕ ನಾನು ಚಿಂತಿಸಿದ ದೇವರು ಯಾರು? ಕೆಲ ವೊಮ್ಮೆ ಭಾವನೆ ಉಕ್ಕಿ 'ದೇವರೇ ಕಾಣಿಸು' ಎಂದು ಕಣ್ಣೀರು ಕರೆದುದು ಯಾರ ಸಲುವಾಗಿ? ಅವನನ್ನು ಚಿಂತಿಸುವ ಗಳಿಗೆಯಲ್ಲೆಲ್ಲ 'ರಾಮ' 'ಕೃಷ್ಣ' ಎಂಬುವಾಗಲೆಲ್ಲ, ಮನಸ್ಸಿನ ಮುಂದೆ ಏನು ನಿಲ್ಲುತ್ತಿತ್ತು? ನನ್ನ ದೇವರ ಔದಾರ್ಯವನ್ನು ಕುರಿತು ಗಾನಮಾಡುವಾಗ, ಯಾವ ಗುಣಗಳ ಕಲ್ಪನೆ ಆಗುತ್ತಿತ್ತು?—ಇವನ್ನೆಲ್ಲ ನಾನು ಯೋಚಿಸದೆ ಇರಲಿಲ್ಲ.

ನಾನು ಎಷ್ಟೇ ಚಿಂತಿಸಲಿ, ಹೇಗೂ ಚಿಂತಿಸಲಿ—ನನ್ನ ದೇವರು ನನ್ನ ಮಿತಿಯನ್ನೂ, ನನ್ನ ಜೀವನದ ಅನುಭವಗಳ ಮಿತಿಯನ್ನೂ ಹೊರಗೆಡಹು ವುದಾಗಿತ್ತು. ದೇವರ ಚೆಲುವು, ದೊಡ್ಡಸ್ತಿಕೆ, ಗುಣಗಳು ನಮ್ಮ ನಮ್ಮ ಅನುಭವಗಳ ಮಿತಿಯನ್ನು ದಾಟಲಾರವೆಂಬುವ ತಿಳಿವಿಗೆ ನಾನು ಬರ ಬೇಕಾಯಿತು.

## ಬಿಂಬ, ಶಬ್ದ

ನಾವು ಚಿಂತಿಸಲಿ, ಯೋಚಿಸಲಿ—ಅವೆಲ್ಲ ಗುಣಗಳು ಬೆಳೆಯಲು, ಕೆಲಸ ಮಾಡಲು, ಎರಡು ಮುಖ್ಯ ಸಾಧನಗಳಿಂದಾಗಿ ಆ ಕೆಲಸ ನಡೆಯ ಬೇಕಾಗುತ್ತದೆ. ಮೊದಲನೆಯದು ಬಿಂಬ, ಎರಡನೆಯದು ಶಬ್ದ. ನಮ್ಮ ಯಾವತ್ತು ನೆನಪುಗಳು ಕಟ್ಟಕಡೆಗೆ ಈ ಆಕಾರಗಳನ್ನು ತಾಳುತ್ತವೆ. ವ್ಯಕ್ತ ವಸ್ತುಗಳೆಲ್ಲ-ಬಿಂಬಗಳ ರೂಪದಲ್ಲಿ ನಮ್ಮ ಮುಂದೆ ಹೊರಳುತ್ತವೆ. ಅವ್ಯಕ್ತ ವಿಷಯಗಳು (Abstract) ಶಬ್ದಗಳ ರೂಪದಲ್ಲಿ ಮನಸ್ಸಿನಲ್ಲಿ ನಲಿಯುತ್ತವೆ.

ಕೆಲಕೆಲವು ವಸ್ತುಗಳು ನಾದ, ಗಂಧ, ರಸ, ಸ್ಪರ್ಶಗಳ ಪ್ರತೀಕಗಳಾಗಿ ಬರಬಹುದು. ತೀರ ಹೆಚ್ಚಿನ ಕೆಲಸ, ವಿಸ್ತಾರವಾದ ಕೆಲಸ ಬಿಂಬ ಮತ್ತು ಶಬ್ದ ಗಳಿಂದ ನಡೆಯಬೇಕು. ದೈವದ ವಿಚಾರವಾಗಿಯಾದರೂ ಸರಿಯೆ, ಬೇರೆ ಇನ್ನಾವ ವಿಚಾರವಾಗಿಯಾದರೂ ಸರಿಯೆ. ತಾಯಿಯ ಕಲ್ಪನೆ ಮಾಡಲು ಮನಸ್ಸು ಹೊರಳಿದರೆ ಆಗ ಮನೆ, ತಾಯಿಯ ರೂಪ, ಅವಳ ಪ್ರೀತಿಯ ನಡಿಗೆ ಕಾಣಿಸಬಹುದು. ತಾಯ್ತನದ ವಿಚಾರವನ್ನು ಸೆನೆಯುವಾಗ, ನಮ್ಮ ತಾಯಿಯ ಬಿಂಬದ ಜತೆಗೆ, ಇನ್ನೂ ಕಂಡ ಕೇಳಿದ ಅನೇಕ ಮಾತೆಯರು ಬಿಂಬಗಳು ಮಾಲೆಯಾಗಿ ಮನಸ್ಸಿನ ಮುಂದೆ ಬರಬಹುದು. ಆ ಮಾತೆ ಯರಾರು? ಅವರು ಪರಿಚಿತವಾದ ಸ್ತ್ರೀರೂಪದಿಂಲೇ ನಮ್ಮ ಕಣ್ಮುಂದೆ ನಿಲ್ಲು ತ್ತಾರೆ. ಮನಸ್ಸಿನ ಮೇಲೆ ಮೂಡುವ ವಿಷಯಗಳು, ಬಿಂಬಕ್ಕೆ ಸಂಕೇತವಾದ, ಇಲ್ಲವೆ ಅನುಭವಕ್ಕೆ ಸಂಕೇತವಾದ ಶಬ್ದಗಳ ಮುಖಾಂತರ ಕಾಣಿಸುವುದು ಸಹಜ. ಪ್ರೀತಿ-ಎಂಬುದನ್ನು ನೆನೆದರೆ, ಪ್ರೀತಿಯ ಒಂದು ಕೃತಿಯ ಬಿಂಬವು ಮನಸ್ಸಿನಲ್ಲಿ ಮೂಡುತ್ತದೆ; ಅದು ಇಲ್ಲದಾಗ ಪ್ರೀತಿ ಸಂಬಂಧವಾದ ಒಂದು ಮಾತೋ, ವಾಕ್ಯವೋ ಮನಸ್ಸಿನಲ್ಲಿ ಓಡಾಡುತ್ತದೆ.

ನಮ್ಮ ಈಶ ಚಿಂತನೆಯ ಪ್ರಯತ್ನದಲ್ಲಿ, ಬೇರೆಯ ರೀತಿ ಮನಸ್ಸಿಗೆ ಇದಿರಾಗುವುದಿಲ್ಲ. ದೇವರ ರೂಪು, ಕೃತಿಗಳು, ಅವನ ಗುಣಗಳು—ನಮ್ಮ ಚಿಂತನೆಗೆ ಗುರಿಯಾಗುವಾಗ, ಅನೇಕ ಬಿಂಬಮಾಲೆಗಳೂ, ಅವನ್ನು ಪುಷ್ಟಿ ಗೊಳಿಸುವ ಮಾತುಗಳೂ, ಮನಸ್ಸಿನಲ್ಲಿ ಓಡಾಡುತ್ತವೆ. ದೇವರ ರೂಪವನ್ನು ನಾವು ನೆನೆಯಲು ಯತ್ನಿಸುತ್ತೇವೆಂದು ತಿಳಿಯಿರಿ. ಮನಸ್ಸು ಅವನಿಗೊಂದು ಚೆಲುವಿನ ಆಕೃತಿಯನ್ನು ಹೆಣೆಯುತ್ತದೆ. ಅವನ ವಿಷಯವಾದ ನಮ್ಮ ಕೇಳಿಕೆಗಳಲ್ಲಿ, 'ಅವನು ಮನುಷ್ಯ ರೂಪಿ'ಯಾಗಿದ್ದರೆ, ಸುಂದರ ಮನುಷ್ಯ ಆಕೃತಿ ನಮಗೆ ಇದಿರಾಗುತ್ತದೆ. ಎಷ್ಟು ಸುಂದರನವನು? ಆಗ ರವಿವರ್ಮನ ಒಂದು ಚಿತ್ರ ಬಿಂಬವೋ, ನಾಟಕ ಮಂಡಲದಲ್ಲಿ ಕೃಷ್ಣನ ಭೂಮಿಕೆಯನ್ನು ವಹಿಸಿದ ಹುಡುಗನ ಬಿಂಬವೋ ಬಂದೀತು. ದೇವರ ಉಡುಪು ತೊಡುಪು ಗಳು, ನಮ್ಮ ಪರಿಚಿತ ಆರವಣದಿಂದಲೇ ಅಲ್ಲಿಗೆ ಬಂದು ಸೇರುತ್ತವೆ. ಅವನ ವರ್ಣನೆಯಲ್ಲಿ ನಾವು ಕಂಡಿರದ ಆಭರಣದ ಹೆಸರಿದ್ದರೆ, "ವತ್ಸಲಾಂಛನ" ಎಂದಿದ್ದರೆ ಅದು ಹೊಳೆಯುವುದಿಲ್ಲ. ಬದಲು ನಮಗೆ ನಿತ್ಯ ಜೀವನದಲ್ಲಿ ಪರಿಚಿತವಾದ ತೋಡಾ, ವಂಕಿ, ಸರಿಗೆ, ಸರ, ಕಿರೀಟ—ಇವುಗಳು ಬಂದು

ಸೇರುತ್ತವೆ. ಇವನ್ನು ಕಾಣದಿರುವಲ್ಲಿ, ಇವುಗಳ ನಕಲಿಗಳು ಬೇರೊಂದು ಚಿತ್ರದಿಂದಲೋ, ಶಿಲ್ಪದಿಂದಲೋ, ನಟರ ತೊಡುಗೆಯಿಂದಲೋ ಬಂದು ಸೇರುತ್ತವೆ.

**ಅನುಭವದ ಮಿತಿ**

ನನ್ನ ನಿತ್ಯ ಜೀವನದ ನೋಟದಲ್ಲಿ-ರವಿವರ್ಮನ ಕೃಷ್ಣ, ನಾಟಕ ಮಂಡಲದ ಕೃಷ್ಣರು ಮಾತ್ರ ಪರಿಚಿತರಾಗಿದ್ದರೆ, ಆಗ ಅವರು ಮಾತ್ರವೇ ಧ್ಯಾನದ ಎಟುಕಿಗೆ ಸಿಗುವಂಥ ಕೃಷ್ಣರಾದಾರು. ಒಂದೆರಡು ಶಿಲ್ಪಗಳನ್ನೋ, ನಂದಲಾಲರ ಚಿತ್ರಗಳನ್ನೋ ನಾವು ಕಂಡಿದ್ದರೆ ಅವುಗಳಾದರೂ ಬಂದಾವು. ಬದಲು, ನಾನೇ ನಂದಲಾಲರಂತೆ ಕೃಷ್ಣನನ್ನು ರಚಿಸಿದರೆ—ಒಂದಿಲ್ಲೊಂದು ಮನುಷ್ಯ ವಿಗ್ರಹ, ನನ್ನ ಹಳೆಯ ಅನುಭವಗಳ ವಿಶೇಷ ಪಾಕದಿಂದ ಉದ್ಭವಿಸ ಬಹುದು. ನಿತ್ಯ ಜೀವನದಲ್ಲಿ ನಾನು ಎಷ್ಟೆಷ್ಟು ಸುಂದರಕಾಯರನ್ನು ಕಂಡಿರು ತ್ತೇನೆಯೋ, ಅಷ್ಟಷ್ಟು ಸುಂದರ ರಾಮ, ರಾಧಾಕೃಷ್ಣರನ್ನು ಮಾತ್ರ ಕಾಣಲು ಶಕ್ಯ. ನನ್ನ ಊಹಾಬಲವನ್ನು ನಾನು ಆದರಿಸುವವನಾದರೆ, ಈ ಅನುಭವಕ್ಕಿಂತ ಬರಿಯ ಒಂದು ಹೆಜ್ಜೆ ಮುಂದುವರಿದು-ಒಂದು ವಿಗೃಹದ ಕೈ, ಒಂದರ ಮುಖ, ಒಂದರ ಅರಿವೆ, ಮತ್ತೊಂದರ ಒಡವೆಗಳನ್ನು ಸೇರಿಸಬಹುದು. ಒಟ್ಟನಿಂದ ನನ್ನ ರೂಪಾನುಭವಗಳ ಮಿತಿಯಿಂದ ನನ್ನ ದೇವರ ರೂಪವೂ ಮಿತಿಗೊಳ್ಳಬೇಕಾಗುತ್ತದೆ.

**ಗುಣ ಚಿಂತನೆ**

ಇನ್ನು ಭಜನೆಯಿಂದಲೋ, ಕೇಳಿಕೆಯಿಂದಲೋ ಪರಿಣಾಮಗೊಂಡ ಮನಸ್ಸು, ದೇವರ ಗುಣಾತಿಶಯವನ್ನು ಎಣಿಸಹೋದರೆ—ಅದರ ಚಳಕ ಮತ್ತಷ್ಟು ಕಡಿಮೆ. ಬಿಂಬಗಳು ಮಾಡಲಾರದ ಹಲವು ಕೆಲಸಗಳಿವೆ; ಶಬ್ದ ಗಳು ಅವನ್ನು ಪೂರೈಸಬಹುದಾಗುತ್ತದೆ. ದೇವರ ಗುಣಾತಿಶಯಗಳನ್ನು ಕುರಿತು ಚಿಂತಿಸುತ್ತೇವೆ—ಎಂದು ತಿಳಿಯಿರಿ. ಆಗ ಔದಾರ್ಯ, ಪ್ರೇಮ ಮೊದಲಾದ ಶಬ್ದಗಳು ನಮಗೆದುರಾಗುತ್ತವೆ. ಅವುಗಳನ್ನು ಕುರಿತು ಇನ್ನಷ್ಟು ವಿಚಾರ ಮಾಡಿದಲ್ಲಿ—ಪ್ರೀತಿಸುವ ಜನಗಳ, ಇಲ್ಲವೆ ತಾಯ್ತಂದೆಗಳ ಚಿತ್ರವೋ, ಉದಾರಿಗಳ ಕೃತಿ ಬಿಂಬವೋ ನಮಗೆ ಎದುರಾಗುತ್ತವೆ. ಹೀಗೆ ಯಾವ ಬಗೆಯಿಂದ ನಾವು ಚಿಂಚಿಸುತ್ತ ಹೋದರೂ-ಆಗ ನಮ್ಮ ನಿತ್ಯ ಜೀವನದ ಒಂದೊಂದು ಅನುಭವವೂ ಈ ಬಿಂಬಗಳ ರಚನೆಗೆ ಕಾರಣವಾಗು

ತ್ತದೆ. ನಾವು ಕಂಡ ಉದಾರಿಗಳ ಮೇಲಿಂದ, ದೇವರ ಔದಾರ್ಯದ ಕಲ್ಪನೆ ಹುಟ್ಟಬೇಕು. ನಾವು ಸವಿದ, ಕಂಡ ಪ್ರೇಮದ ನೋಟಗಳಿಂದ, ದೇವರ ಪ್ರೇಮದ ನೋಟ ಕೆರಳಬೇಕು. ಈ ರೀತಿ ಅನುಭವಗಳಿಂದ ನಿಲ್ಲಲಾರದ ಯಾವತ್ತು ಗುಣನಿರೂಪಣೆಗಳು ಬರಿಯ ಶಬ್ದಗಳಾಗಿಯೇ ಉಳಿಯುತ್ತವೆ. ಕೇವಲ ಅರ್ಥವಿಲ್ಲದ ಶಬ್ದಗಳವು.

### ವಿಸ್ತೃತ ಜೀವನದಿಂದ

ನಾವು ಕೃಷ್ಣನ ಮಧುರ ಭಾವವನ್ನು ಧ್ಯಾನಿಸುವಾಗ, ಅದರ ನೆಲೆಗಟ್ಟು ನಾವು ಕೇಳಿದ ಕತೆಗಳ ಮೇಲೆ ನಿಲ್ಲಬೇಕಾಗುತ್ತದೆ. ರಾಧಾಕೃಷ್ಣರ ಕತೆ ನಮಗೆ ತಿಳಿದಿದೆಯಾದರೂ, ಅವರ ಮಧುರಭಾವವೇನೆಂದು ಕಲ್ಪಿಸುವಾಗ, ನಾವು ಕಂಡ ಉತ್ತಮ ದಾಂಪತ್ಯ ಜೀವನದ ನೆನಪೇ ಅದನ್ನು ಸೂಚಿಸಬೇಕು. ರಾಮನ ಶೌರ್ಯ ನಾವು ಜೀವನದಲ್ಲಿ ಕಂಡ ಜೀವನದ ಯಾವುದಾದರೂ ಒಂದು ಶೂರಕೃತಿಯಿಂದ ಬಿಂಬಿತವಾಗಬೇಕು. ಆದರೆ ನಾವು ಮೂಲತಃ ಸುಂದರ ದಾಂಪತ್ಯವನ್ನೂ, ಶೂರತನದ ಕೃತಿಗಳನ್ನೂ ಕಾಣದವರಾಗಿದ್ದರೆ— ಆಗ ಕೃಷ್ಣನ ಮಧುರ ಭಾವ, ರಾಮನ ಶೌರ್ಯಗಳು—ಬರಿಯ ಸದ್ದುಗಳಾಗಿಯೇ ಉಳಿದಾವು. ಹುಟ್ಟುಕಿವುಡನೊಬ್ಬನು ಕೃಷ್ಣನ ಕೊಳಲಗಾನದ ಕಲ್ಪನೆ ಮಾಡಬಲ್ಲನೇ? ಕಿವಿಯುಳ್ಳವನು ಸಹ, ಕೃಷ್ಣನ ಕೊಳಲ ಸವಿಯನ್ನು ನೆನೆಯಲು ಹೋದರೆ, ಜೀವನದಲ್ಲಿ ಕೇಳಿದ ಏನಾದರೊಂದು ಕೊಳಲ ಗಾನದಿಂದಲೇ ಅದು ಪ್ರೇರಿತವಾಗಬೇಕಾಗುತ್ತದೆ. ಹೀಗೆ ನಮ್ಮ ಜೀವನದ ಅನುಭವಗಳು ಎಷ್ಟೆಷ್ಟು ವಿಸ್ತೃತವಾಗುತ್ತವೋ ಅಷ್ಟಷ್ಟು ಹೆಚ್ಚಿಗೆ ನಮ್ಮ ಭಾವನೆಗಳು ಕೆರಳಲು, ಬೆಳೆಯಲು, ಸಫಲವಾಗಲು—ಅನುಕೂಲ ವಾಗುತ್ತದೆ.

### ಜೀವನ ಮುಖ್ಯ

ಇದರಿಂದ ನನಗೆ ಹೊಳೆದ ಮುಖ್ಯ ವಿಷಯವೆಂದರೆ—ನಮ್ಮ ಬದುಕೇ ನಮ್ಮ ಭಾವನೆಗಳಿಗೆ ಅಡಿಗಲ್ಲು. ನಮ್ಮ ದೇವರು ಭಾವನೆಗಳಲ್ಲಿ ದೊಡ್ಡವ ನಾಗಲು, ಜೀವನ ದೊಡ್ಡದಾಗಬೇಕೆಂದು. ಎಷ್ಟು ಸವಿಯಾದ, ವಿಸ್ತಾರವಾದ ಜೀವನದ ಹಿನ್ನೆಲೆಯು ನಮಗಿರುತ್ತದೋ ಅಷ್ಟು ವಿಸ್ತಾರ ದೇವ ನಮಗೆ ಇದಿರಾಗುತ್ತಾನೆ. ದೇವನು ನಮ್ಮ ಅನುಭವಗಳ ಮಿತಿಗೆ ಒಳಗಾಗಿರಲು, ಅನುಭವಗಳನ್ನು ನಿರಾಕರಿಸುವ ಸಿದ್ಧಾಂತ ನನಗೆ ಸಲ್ಲದೆನಿಸಿತು. ಜೀವನ

ದಿಂದಲೇ ದೇವರು ಉದ್ಭವಿಸಬೇಕು, ಬೆಳೆಯಬೇಕು, ಹಿರಿಯನಾಗಬೇಕು. ಎಷ್ಟು ಎಷ್ಟು ನಮ್ಮ ಜೀವನ ಹಿರಿದೋ, ಅಷ್ಟು ಅಷ್ಟು ದೇವರೂ ಹಿರಿದು. ಆದುದರಿಂದ ದೇವರಿಗಿಂತ ಜೀವನವೇ ದೊಡ್ಡದು. ಅದರಿಂದಲೇ ದೇವರ ಮೂಲ.

ಈ ತನಕ ಸೃಷ್ಟಿಸಿದ ಸಾಕಾರ, ನಿರಾಕಾರ ದೇವರುಗಳನ್ನು ಕುರಿತು ವಿಚಾರಿಸುವ. ಇದರಲ್ಲಿ–ಎರಡನೆಯ ವರ್ಗದ ದೇವರನ್ನು ಶಬ್ದದಿಂದ ನಿಲಿಸ ಬೇಕಾಗಿದೆ. ತರ್ಕದಿಂದ ಅದರ ನೆಲೆ. ಅನೇಕ 'ನಿರ್'ಗಳ ಮೇಲೆ ದೇವರ ಗುಣ ನಿಂತಿದೆ. ನಮ್ಮ ಮನಸ್ಸು 'ಗುಣ'ಗಳ ಒಂದೊಂದು ರೂಪವನ್ನು ಕಲ್ಪಿಸ ಬಲ್ಲದು. ಮನಸ್ಸಿನ ಸ್ವಭಾವವೇ ಹಾಗಿದೆ. ಹೀಗಿರಲು "ನಿರ್" ವರ್ಗದ ನೂರು ಗುಣಗಳಿರಲಿ, ಸಾವಿರವಿರಲಿ, ನಮ್ಮ ಎಟುಕಿಗೆ ಸಿಲುಕಿದ ವಸ್ತುಗಳಾ ಗುತ್ತವೆ. ಆದುದರಿಂದ ಸಗುಣ ದೇವರೇ ನಮಗೆ ಪ್ರಿಯನಾಗುತ್ತಾನೆ. ಆದರೆ ಜನತೆ ಎಂಥ ಸಗುಣ ದೇವರನ್ನು ನಿರ್ಮಿಸಿದೆ ಎಂದು ವಿಚಾರ ಮಾಡಿ ದಲ್ಲಿ–ಯಾವಾವ ಜನರಲ್ಲಿ, ಯಾವಾವ ನೆಲೆಯಲ್ಲಿ, ಯಾವಾವ ಕಾಲದಲ್ಲಿ, ಅವನ ಕಲ್ಪನೆ ತೊಡಗಿತೋ ಅವೆಲ್ಲವುಗಳ ಮಿತಿಯನ್ನು ತೊಟ್ಟು ನಿರ್ಮಿತ ರಾಗಿದ್ದಾರೆ. ಯಹೂದಿಯರ ದೇವರು ಅವರಿಗೂ, ಇರಾನಿಯರ ದೇವರು ಅವರಿಗೂ ಮಾತ್ರ ಅನ್ವಯಿಲು ಇದೇ ಕಾರಣ. ನಮ್ಮ ದೇವರುಗಳು ಭರತ ಖಂಡದ ಹೊರಗೆ ಕಾಲಿಡದಿರಲಿಕ್ಕೆ ಅದೇ ಕಾರಣ. ಹಾಗೆಯೇ–ಸೂರ್ಯ, ಚಂದ್ರ, ನರಕ, ಸೃಷ್ಟಿ—ಇವೆಲ್ಲವುಗಳು ಆಯಾಯ ಕಾಲದ ಜನಗಳ ತಿಳಿ ವಳಿಕೆಯ ಮಿತಿಯನ್ನು ತಾಳಿವೆ.

**ಅನುಭವ, ಊಹೆ**

ವಿಷ್ಣುವಿನ ಪೀತಾಂಬರ, ಒಂಕಿ. ಸರಿಗೆ, ಕಿರೀಟಗಳು ಅವನ ಜನ್ಮ ಭೂಮಿ, ಜನ್ಮಕಾಲದ ಒಡವೆಗಳಾಗಿವೆ. ಅವನನ್ನು ನಿರ್ಮಿಸಿದ ಜನರುಗಳು ದೇವರನ್ನು ಎಣಿಸಿದಾಗಲೆಲ್ಲ–ಬರಿಯ ಮನುಷ್ಯ ಕುಟುಂಬದ ಸುಖದುಃಖ ಚಿಂತಿಸಿದವರಾದುದರಿಂದ, ವಿಶ್ವಪಾಲಕನಿಗೂ—ತಮಗೆ ತಿಳಿದ, ಉತ್ತಮ ಶರೀರವೆಂಬ ಮನುಷ್ಯ ಶರೀರವನ್ನೇ ಒದಗಿಸಿದರು. ಹೆಚ್ಚೆಂದರೆ—ಕಲ್ಪನೆ ಯನ್ನು ಹೊಸೆದು ನಾಲ್ಕು ಕೈಗಳನ್ನೊ, ನಾಲ್ಕು ತಲೆಗಳನ್ನೋ ಮೂರು ಕಣ್ಣನ್ನೋ ಸೇರಿಸಿದ್ದುಂಟು. ಆ ದೇವರಿಗೆ ಈಜಾಡಲು ಬಾರದಾಗ ಆತ ಮೀನಾಗಬೇಕಾಯಿತು. ತೀರ ಕ್ರೂರಿಯಾಗಬೇಕಾದಾಗ ಸಿಂಹನಾಗಬೇ

ಕಾಯಿತು. ಈ ಎಲ್ಲ ದೇವರುಗಳ ಕಲ್ಪನೆಯನ್ನು ಮಾಡಿದ ಜನರು ವಿಶ್ವ ದೈವವನ್ನು ಕಲ್ಪಿಸಲು ಅನುಭವ ಸಾಲದವರೆಂದು ತರ್ಕಿಸಬೇಕಾಗುತ್ತದೆ.

**ನಮ್ಮಿಂದಾದ ದೇವರು**

ನಮ್ಮ ಭಾವನೆಗಳಿಂದಲೇ ಉಗಮವಾಗುವ ದೇವರದೇ ಚಿಂತನೆ ನಮ್ಮನ್ನು ಉದ್ಧರಿಸೀತೇ ಎಂಬ ಪ್ರಶ್ನೆ ಇದರಿಂದ ಹೊರಡುವುದು ಸಹಜ. ನಮ್ಮ ಮಿತಿಯಿಂದ ನಮ್ಮ ದೇವರಿಗೂ ಮಿತಿ, ನಮ್ಮ ದೇವರಿಂದ ನಮಗೂ ಮಿತಿ. ಆದರೆ ಇಲ್ಲೊಂದು ವ್ಯತ್ಯಾಸವಿದೆ. ನಮ್ಮಿಂದ ನಮ್ಮ ದೇವರ ಮಿತಿ–ಎನ್ನುವಾಗ ನಮ್ಮ ಅನುಭವ, ಊಹೆಗಳಿಂದಾಗಿ ಆ ದೇವರು ನಿರ್ಮಾಣ ಗೊಳ್ಳುವುದರಿಂದ, ಮಾನವನ ಊಹೆ ವಿಸ್ತರಿಸುವಷ್ಟರ ಮಟ್ಟಿಗೆ ಅವನ ಜೀವನ ಹಿರಿದಾಗಲೂಬಹುದು. ಮನುಷ್ಯ ಜೀವನ ಬೆಳೆಯುತ್ತಿರುವ ರೀತಿ ಯಾದರೂ ಹಾಗೇನೆ. ಅದರೆಡೆಯಲ್ಲಿ ದೇವರು ದೊರೆತೇನೆ ಈ ಕೆಲಸ ಆಗಬೇಕೆಂಬ ನಿಯಮವಿಲ್ಲ. ಇನ್ನು, ದೇವನೊಬ್ಬನಿದ್ದಾನೆ ಎಂದು ಒಪ್ಪಿ ದಲ್ಲಿ, ಆತಗೆ ಅಂಜಿ ನಡೆಯುತ್ತೇವೆ ಎನ್ನುವುದರಿಂದ ಅಂಥ ಭಾವನೆ ನಮಗೆ ಸಹಾಯಮಾಡಲಾರದೇ–ಎನ್ನುವವರುಂಟು. ದೇವರು, ಅವನನ್ನು ಕುರಿತು ಭಕ್ತಿ, ಆರಾಧನೆ ಇವೆಲ್ಲ ಯಾವ ತನಕ ನಿತ್ಯಜೀವನದ ನಡವಳಿಕೆಗೆ ಬಾರದೆ, ಕೇವಲ ನಮ್ಮ ಅವನ ಮನೋಸಂಬಂಧವಾಗಿರುತ್ತವೋ, ಅಲ್ಲಿಯ ತನಕ ನಮ್ಮ ಬಾಳು ಅದರಿಂದ ವಿಸ್ತರಿಸುವಂತೆ ನನಗೆ ಕಾಣಿಸದು. ದೇವರಿದ್ದಾನೆ ಎನ್ನುವವನು ಬದುಕಿನಲ್ಲೆಲ್ಲ ಅದನ್ನು ಕಾಣದೆ, ತಿಳಿಯದೆ, ಮಾಡುವ ಬರಿಯ ಪೂಜೆಗಳಿಂದ ಏನೂ ಸಾಧಿಸುವಂತಿಲ್ಲ.

**ದರ್ಶನ**

ನನ್ನ ಕೆಲವು ತೀರ ಆಪ್ತ ಗೆಳೆಯರಿದ್ದಾರೆ. ಅವರು ತಮಗೆ ದೇವರ ದರ್ಶನವಾಗಿದೆಯೆಂದೂ ಅಂದುದುಂಟು. ನನಗೆ ಆ ಮಾತು ಸೋಜಿಗ ವೆನಿಸುವುದಿಲ್ಲ. ನಮ್ಮ ಯಾವುದೇ ಕಡುವಾದ ಚಿಂತನೆಯ ವಿಷಯ ನಮಗೆ 'ದರ್ಶನ'ವಾಗಬಲ್ಲದು. ನನಗೆ 'ಬೇನೆಯಿದೆ' ಎಂಬುದೇ ಮನಸ್ಸಿಗೆ ತೀರ ಹೊಳೆದಲ್ಲಿ, ಅದೇ ನಿಜವೆನಿಸಿ, ನಾವು ಬೇನೆಯಿಂದ ನರಳಬಹುದು. ಬೇನೆಯಲ್ಲಿರುವಾತ ಬೇನೆಯಿಲ್ಲವೆಂದು ಮನಸ್ಸನ್ನು ಬೋಧಿಸುವ ಹಟ ತೊಟ್ಟರೆ, ಬೇನೆ ಹೋಗಬಹುದು. ಅದರಂತೆ ಅನೇಕ ಸುಂದರ ಕೃತಿ, ಕವನ, ಗಾನಗಳು—ಭಾವದಲ್ಲಿ ಮುಳುಗಿದಾಗ, 'ದರ್ಶನ'ಗಳೆನಿಸಿ ಬಿಡುತ್ತವೆ. ಈ

ಭಾವನೆಗಳ ಮಟ್ಟ, ಭವ್ಯತೆಗಳು—ಭಾವುಕನ ಅನುಭವದ ಮಿತಿಯನ್ನು, ಕಲ್ಪನೆಯ ಮಿರುಗನ್ನು ದಾಟಲಾರವು. ಜೀವನದ ಉಳಿದುವೆಲ್ಲವನ್ನು ಅಲ್ಲಗಳೆದು "ದೇವನೊಬ್ಬನೇ" ನಿಜವೆಂದು ಅಡಿಗಡಿಗೆ ಚಿಂತಿಸುವ ವ್ಯಕ್ತಿಯ ಮುಂದೆ ದೈವ "ದರ್ಶನ" ಸಿಗಲೂಬಹುದು. ರಾಮಕೃಷ್ಣ ಪರಮಹಂಸರಿಗಾದಂತೆ, ಇದೇ ದರ್ಶನ ಮೇಲಿಂದ ಮೇಲೆ ಆಗಲೂಬಹುದು. ಆದರೆ ಈ ದರ್ಶನ ಬಿಂಬಿತರಾದ ರಾಮ, ಕೃಷ್ಣ, ಸೀತೆಯರು ಯಾರೆಂದರೆ—ಅವರ ಅನುಭವದಿಂದ ಉಂಟಾದವರು. ಅವರು ಕೇಳಿದ ರಾಮಾಯಣದ ಕತೆಯಿಂದ ಕಲ್ಪಿತರಾದವರು. ಈ ಕಲ್ಪನೆಯ ಮಿತಿಯೇ ಜಡರ ಜೀವನದ ಅನುಭವದ ಮಿತಿ. ಇಂಥ ದರ್ಶನ ದೊರೆತ ನನ್ನ ಗೆಳೆಯರೂ ಇದ್ದಾರೆ. ಆದರೆ ಇಷ್ಟೇ ಸೋಜಿಗ–ಅವರ ಧರ್ಮ, ದೇವರ ಮೇಲಿನ ಖಾಸಗಿ ಪ್ರೇಮವಾಗಿದೆ. ಅವರ ಜೀವನದಲ್ಲಿ ಕೇವಲ ಸ್ವಜಾತಿಯ ಜನರೇ ಅವರ ಗೆಳೆಯರು. ಆದುದರಿಂದ "ದರ್ಶನ"ವಾದ ಬಳಿಕವೂ ಅವರ ಗುಣ, ನಡತೆ, ವಾತ್ಸಲ್ಯ ಅವರ ಜನ, ಮನಗಳಿಗಿಂತ ಮೀರಿ ಹೋಗಿಲ್ಲ. ಇಸ್ರೇಯಲರನ್ನು ಉದ್ಧರಿಸಿ ಈಜಿಪ್ತಿನವರನ್ನು ದಂಡಿಸುವ ದೇವರು, ಕೇವಲ ನಂಬಿಗಸ್ಥರನ್ನು ಕಾಪಾಡುವ ದೇವರು, ಕೇವಲ ಭೂಸುರರ ಸಲುವಾಗಿ ಅವತರಿಸಿದ ದೇವರು—ಇಂಥೆಲ್ಲ ನಿರ್ಮಾಣಗಳಾಗಿಲ್ಲವೇ? ಅಂಥ ದೇವರುಗಳ ಸ್ವರ್ಗದಲ್ಲಿ ಇತರ ಜಾತಿಯ ಜನರು ನಿಂತಿರುವ ಬಣ್ಣನೆಗಳು ಅವರ ಪುರಾಣಗಳಲ್ಲಿ ಕೇಳಿಸುವುದಿಲ್ಲ. ಶ್ರೀ ರಾಮಕೃಷ್ಣರ ಜೀವನದಲ್ಲಿ–ನಾವು ಕಾಣುವ ಜೀವನದ ಇನ್ನೊಂದು ಸೆರಗಿದೆ. ಆರಂಭದಿಂದ ಬಡವರು, ದುಃಖಿಗಳು–ಎಂದರೆ ಅವರಿಗೆ ಕನಿಕರ. ಅವರ ಆರಂಭದ ನಡತೆಗಳೂ—ದೇವರು ಎಲ್ಲೆಂದರಲ್ಲಿರುವ–ಎಂಬ ನಂಬಿಕೆಯಿಂದ ಬಂದುವು. ವ್ಯಕ್ತಿ ತನ್ನ ಸುತ್ತಲಿನ ಪ್ರಪಂಚದೊಡನೆ ಹೇಗೆ ತನ್ನನ್ನು ಬಿಗಿದುಕೊಳ್ಳುತ್ತಾನೆಯೋ, ಅದರ ಮೇಲಿಂದ ಅವನ ಅನುಭವಗಳು ಹಿರಿದಾಗುತ್ತವೆ. ಹಿರಿಯ ಅನುಭವಗಳಿಂದ ತುಂಬಿರುವುದೇ ದೊಡ್ಡ ಜೀವನ. ಅಂಥ ಭಕ್ತರ ದೇವರೂ ದೊಡ್ಡವನಾಗುತ್ತಾನೆ.

**ದರ್ಶನದ ಮಿತಿ**

ನಾವು ನಮ್ಮ ಚಿಂತನೆಯಿಂದ, ಚಿಂತನೆಗೆ ಗುರಿಯಾದ ವಸ್ತುವಿನ ದರ್ಶನ ಹೊಂದಬಹುದು. ಅದರಿಂದ ಜೀವನಕ್ಕೆ ಸೊಗಸನ್ನು ತರಬಹುದು. ವಿಜ್ಞಾನಿಯಾದವನು ತನ್ನ ದರ್ಶನಗಳಿಂದ ತನಗೂ ಇತರರಿಗೂ ಜ್ಞಾನದೊರಕಿಸಿ,

ಅಂಥ ಸೊಗಸನ್ನು ಉಣಿಸಬಹುದು. ಆದರೆ ಈ ದರ್ಶನದಿಂದ, ನಮ್ಮ ಮುಂದಣ ಜನ್ಮ ತಪ್ಪೀತೇ ಎಂದರೆ, ಅದು ಉಳಿದವರಿಗಿದ್ದರೆ, ನಮಗೂ ಇರಬಹುದು. ಇತರ ಜೀವಿಗಳಿಗಿಲ್ಲದ್ದು ನಮಗೆ ಬರಲಾರದು. ಆ ಪ್ರಶ್ನೆ ಇಂಥ "ದರ್ಶನ"ವನ್ನು ಅವಲಂಬಿಸಿಲ್ಲ.

**ನಿರಾಕರಣೆ ತಪ್ಪು**

ಬದುಕು ವಿಸ್ತರಿಸಲು ಯಾವುದು ಅವಶ್ಯ? ನಮ್ಮೆಲ್ಲ ಶಕ್ತಿಗಳು. ಸುತ್ತಲಿನ ಪ್ರಪಂಚದಲ್ಲಿ ಅವನ್ನು ನಾವೆಷ್ಟು ಎಷ್ಟು ನಿರಾಕರಿಸುತ್ತೇವೆಯೋ, ಅಷ್ಟು ನಮ್ಮ ಅನುಭವಗಳು ಮಿತಗೊಳ್ಳುತ್ತವೆ. ಅನುಭವ—ಎಂದರೆ ಒಳಿತೂ ಇದೆ; ಕೆಟ್ಟುದೂ ಇದೆ. ಎಚ್ಚರದಿಂದ ಪ್ರತಿಯೊಂದನ್ನೂ ಯೋಚಿಸಿ ಮುಂದುವರಿಯುವ ಜೀವಿ, ಯಾವ ಅನುಭವದಿಂದ ಬದುಕು ಸುಖಮಯ ವಾದೀತೆಂದು ತಿಳಿಯುತ್ತಾನೆ. ಯಾವ ದೃಷ್ಟಿಯಿಂದ ಬದುಕು ಹಿಗ್ಗುವುದು ಎಂಬುದನ್ನು ತಿಳಿಯುತ್ತಾನೆ. ಈ ವಿಷಯವಾಗಿ ಇನ್ನೊಮ್ಮೆ ಚರ್ಚಿಸುವ. ಈಗ ಅನುಭವದಿಂದ ಬದುಕು ಬೆಳೆಯಲು ನಾವು ಜೀವನ ನಿರಾಕರಿಸು ವುದಾಗಲಿ, ಬಾಳ್ವೆಯು ಅರ್ಥವಿಲ್ಲದ್ದು-ಎಂದು ತಿಳಿಯುವುದಾಗಲಿ ಸಮ ನಾದ ಮಾರ್ಗವಲ್ಲ-ಎಂದಂತಾಯಿತು. ಇಳೆಯ ಬಣ್ಣ, ಬೆಡಗುಗಳು ಮಾಯ ವೆಂದೋ, ಅರ್ಥವಿಲ್ಲದ್ದೆಂದೋ ತಿಳಿದು, ಕಣ್ಣಿಗೆ ಅದನ್ನೇ ಕಲಿಸಿ, ಮನ ಸ್ಸಿಗೂ ಬೋಧಿಸಿದ್ದಾದರೆ-ಆಗ ನಾವು ನಮ್ಮ ಕಣ್ಮುಂದೆ ನಿಲ್ಲಿಸುವ ದೈವ ಬಿಂಬದ ನೀಲ ಮೇಘ ಬಣ್ಣಕ್ಕೆ ಯಾವ ಮೋಹಕತೆಯೂ ಬರಲಾರದು. ಇಳೆಯ ಅರಿವೆ, ಆಭರಣಗಳಲ್ಲಿ ಚೆಲುವನ್ನು ಕಾಣಲಾರದೆ ಹೋದರೆ, ಇಲ್ಲಿನ ಹೂವುಗಳಲ್ಲಿ ಮೋಹಕತೆ ಇಲ್ಲವೆಂದು ನಮ್ಮ ಮನಸ್ಸು ಹೇಳುವಲ್ಲಿ, ಅವೇ ನಿರುಪಯೋಗಿ ವಸ್ತುಗಳ ಕಂತೆಯನ್ನು ನಮ್ಮ ದೇವರ ಬಿಂಬ ಹೊತ್ತು ನಿಂತರೆ ಅಸಹ್ಯವೆನಿಸೀತು. ಇಲ್ಲಿ ಚೆಲುವು ಮಾಯೆಯಾದರೆ, ನಮ್ಮನ್ನು ದುರ್ಬಲಗೊಳಿಸುವುದಾದರೆ–ಈ ಚೆಲುವಿನ ಅನುಭವಗಳಿಂದಲೇ ಹೊರ ಡುವ ದೇವರ ಚೆಲುವು, ಅದೇ ಕೆಲಸ ಮಾಡೀತು. ಲೋಕದಲ್ಲಿ ಬದುಕಿ ರುವ ಮನುಷ್ಯ—ತನ್ನ ಕಣ್ಣು, ಕಿವಿ, ರಸನೆ, ಮೂಗು ತ್ವಚೆಗಳನ್ನು ಬರಡಾ ಗಿಸಿದುದರಿಂದ, ಏನನ್ನೂ ಸಾಧಿಸಿದಂತಾಗುವುದಿಲ್ಲ. ಇಂದ್ರಿಯಗಳೇ ನಮ್ಮ ಬಂಧನಕ್ಕೆ ಕಾರಣವಾಗುವುದಾದರೆ, ಭಕ್ತರು ಕುರುಡರೂ, ಕಿವುಡರೂ, ಮೂಗು ಹರಕರೂ ಆಗುವುದು ತಮ್ಮ ಸಾಧನೆಗೆ ಪ್ರಥಮ ಮೆಟ್ಟಲೆನಿಸ

ಬಹುದು. ಹಾಗಿಲ್ಲ; ಪ್ರೇಕ್ಷಕನ ನೋಟದ ರೀತಿಯಲ್ಲೇ ಕೊರತೆ ಹುದುಗಿರ ಬಹುದು. ಅದನ್ನು ತಿಳಿದು ನಿವಾರಿಸುವ ಗುರಿ ನಮಗಿರಲಿ.



**ಗುರಿ, ಸಂತೋಷ**

ಮನುಷ್ಯನು "ಈಶ ಚಿಂತನೆಯೊಂದೇ ಸುಖ, ಉಳಿದೆಲ್ಲವೂ ದುಃಖ ಮಯ" ಎಂಬ ತೀರ್ಮಾನವನ್ನು ತಂದುಕೊಂಡು, ತಾನು ನಂಬಿದುದನ್ನು ಸಾಧಿಸಿ ಸಂತೋಷಪಡಬಹುದು. ಅತೀ ಸಾಧನೆಯಿಂದ ಬರುವ ಯಾವ ಬಗೆಯ ಯಶಸ್ಸೂ, ಹೆಚ್ಚಿನ ನೆಮ್ಮದಿಯನ್ನು ಕೊಡಬಹುದು. ಕೆಲವರು ತಮ್ಮ ಸಾಧನೆಯ ಗುರಿಯನ್ನು ಪದವಿಯನ್ನಾಗಿಯೋ, ಹಣವನ್ನಾಗಿಯೋ ಇರಿಸಿಕೊಳ್ಳುತ್ತಾರೆ. ಇನ್ನು—ಕೆಲವರ ಗುರಿ ದೇವರೋ, ಇನ್ನಾವುದೋ ಒಂದು ಸತ್ಯ ಶೋಧನೆಯೋ ಆಗಿರಬಹುದು. ಆ ಗುರಿಯನ್ನೇರುವ ತನಕ ಮನುಷ್ಯನಿಗೆ ತಾಳ್ಮೆಯಿಲ್ಲ; ಸಂತೋಷವಿಲ್ಲ; ಗುರಿಯನ್ನೇರಿದಲ್ಲಿ ಆನಂದ ವುಂಟಾಗುತ್ತದೆ. ಈಶನನ್ನು ಹೊಂದುವೆವು ಎಂಬ ಅಭಿಲಾಷೆಯಲ್ಲಿಯೂ ಹಾಗೇನೆ. "ದರ್ಶನ"ವಾಗದೆ ಹೋದರೆ ದುಃಖ; ದರ್ಶನವಾಯಿತೆಂದರೆ ಸಂತೋಷ. ಈ ದರ್ಶನವು ತನ್ನಲ್ಲೇ, ತನ್ನಿಂದಲೇ ಕಾಣುವ ದರ್ಶನ. ಅನೇಕ ಬಗೆಯ ಸತ್ಯಾನ್ವೇಷಣೆಗಳೆಂಬುವು ಈ ರೀತಿಯ ದರ್ಶನದಲ್ಲಿ ಪರಿಣ ಮಿಸಬಹುದು. ಬರಿಯ ರೂಪವೊಂದರ ಕಲ್ಪನೆಯನ್ನು ಅತಿಕರಿಸಿ, ಅದನ್ನು ದರ್ಶನವಾಗಿ ಮಾಡಿಕೊಳ್ಳುವುದಕ್ಕಿಂತ, ಜೀವನದ ಸತ್ಯ, ಸೊಗಸುಗಳ ಕಿಂಚಿತ್ತಾದರೂ ಅರಿವು ತಂದುಕೊಡುವ ಅನ್ವೇಷಣೆಯು ಇನ್ನೂ ಸೊಗ ಸಿನದು; ಅದಕ್ಕಿಂತಲೂ ಸೊಗಸಿನದು. ಈ ಸೊಗಸಿನ ದರ್ಶನವಾಗಲು ಬುಡದಲ್ಲಿಯೇ ವಿಸ್ತಾರ ಜೀವನ ಬೇಕಾಗುತ್ತದೆ; ಬರಿಯ 'ಈಶ'ನ ರೂಪ ಸಿದ್ಧಿಗೆ ಇಷ್ಟು ಬೇಕಿಲ್ಲ. ವಿಸ್ತೃತವಾದ ಜೀವನವಿಲ್ಲದವನ 'ಈಶ' ದರ್ಶನವು ಸಹ ಸಂಕುಚಿತ ದರ್ಶನವಾದೀತು.

**ಶಾಂತಿ**

ಈ ತನಕ ದೈವವನ್ನು ಗುರಿಯಾಗಿರಿಸಿಕೊಳ್ಳುವ ವಿಚಾರ ಹೇಳಿದೆ. ಈಶನ ದರ್ಶನವಾಗಲಿ, ಆಗದಿರಲಿ—ಆ ರೀತಿಯ ಚಿಂತನೆ, ಭಜನೆಗಳು ಮನಸ್ಸಿಗೆ ನೆಮ್ಮದಿಯನ್ನು ಕೊಡುವುದಿಲ್ಲವೆ? ಮನುಷ್ಯನಿಗೆ ಬೇಕಾದುದು ಶಾಂತಿ; ಅದು ದೊರೆತರಾಯಿತಲ್ಲ—ಎನ್ನುವವರುಂಟು. ಶಾಂತಿಯನ್ನು ದೊರಕಿಸಲು ಯಾವುದು ಬೇಕು, ಯಾವುದು ಬೇಕಿಲ್ಲ-ಎಂಬುದನ್ನು ಈಗ

ವಿಚಾರಿಸೋಣ. ಮನಸ್ಸು ಬಹುಮುಖವಾಗಿ ಓಡುವುದರಿಂದ ಅಶಾಂತಿ ಬರಬಹುದು. ಅದನ್ನು ಯಾವುದಾದರೊಂದು ಉದ್ದೇಶದ ಕಡೆಗೆ ಹರಿಯ ಗೊಟ್ಟರೆ—ಶಾಂತಿ ಉಂಟಾಗಬಹುದು. ಆ ಗುರಿಯನ್ನು ಸೇರುವ ತನಕ ಮನಸ್ಸು ತಳಮಳಿತವಾಗಿಯೇ ಇರುತ್ತದೆ. ಆದರೂ ಗುರಿಯ ಅನ್ವೇಷಣ ದಲ್ಲಿ, ಅನೇಕ ಜ್ಞಾನಗಳು ಉಂಟಾಗಿ, ಅವುಗಳಿಂದಲೂ ವಿಶೇಷವಾದ ತಿಳಿವು ಪ್ರಾಪ್ತಿಸಿ—ಶಾಂತಿ ದೊರೆಯಬಹುದು. ಇದು ಈಶ ಚಿಂತನೆಯೊಂದಕ್ಕೇ ಅಲ್ಲ, ವೈಜ್ಞಾನಿಕ ಶೋಧೆಗೂ, ಯಾವುದೇ ಕಲಾಸೃಷ್ಟಿಗೂ ಅನ್ವಯಿಸು ವಂತಹ ಮಾತು. ಗಣಿತಜ್ಞನಿಗೆ ಗಣಿತದಿಂದ ಶಾಂತಿ ದೊರೆಯಬಲ್ಲುದು. ಎಡಿಸನನಿಗೆ ತನ್ನ ಪರಿಶೋಧನೆಗಳಿಂದ ಹೆಚ್ಚಿನ ಶಾಂತಿ ದೊರೆತಿರಬಹುದು. ಮನಸ್ಸು ಯಶಸ್ಸನ್ನು ಗಳಿಸಿದಲ್ಲಿ ಶಾಂತಿ ಆಹ್ಲಾದವಾಗಬಹುದು. ಆದರೆ ಈ ಬಗೆಯ ಶಾಂತಿ ಬಂದರೂ 'ಜೀವನ'ವೇನೆಂಬ ಪ್ರಶ್ನೆ ಉಳಿಯುತ್ತದೆ. ಬದುಕುವುದು ಗಣಿತಕ್ಕಾಗಿ, ಬದುಕುವುದು ಜ್ಞಾನಕ್ಕಾಗಿ, ಇಲ್ಲವೆ ಬದುಕು ವುದು ದೇವರಿಗಾಗಿ—ಎಂಬ ತೀರ್ಮಾನ ಇದರಿಂದ ಸಿದ್ಧವಾಗದಷ್ಟೆ.

**ಎಲ್ಲಿಂದ ಶಾಂತಿ?**

ಈಗ ನಾನು ಚಿಂತನೆಯ ನನ್ನ ಸಾಧನವನ್ನು ಪರಿಶೀಲಿಸುತ್ತೇನೆ. ಈ ಸಾಧನೆಗಳಲ್ಲಿ ಏಕಾಗ್ರ ಚಿತ್ತತೆಯು ಒಂದು ಅಂಶ. ಅದನ್ನು ಕುರಿತೇ ಮೇಲೆ ಹೇಳಿದ್ದು; ಇನ್ನೊಂದು ಭಾವಪ್ರಕಟನೆಯ ಸಾಧನವಾದ "ಗೀತ" ಭಜನೆಗಳಿಂದಲೇ ಶಾಂತಿ ದೊರೆಯಬಹುದು. ಹಾಡಿನ ಒಂದು ಶಬ್ದವನ್ನೂ ತಿಳಿಯದೆ, ಗೀತೆಯ ಅರ್ಥ ತಿಳಿಯದೆ, ಬರಿಯ ಯಾಂತ್ರಿಕ 'ರಾಮ ರಾಮ' ಗಳಿಂದಲೂ ಶಾಂತಿ ಬರಬಹುದು. ಕೆಲವು ಬಾರಿ ಅದೂ ಬರುತ್ತದೆ. ಅದಕ್ಕೆ ಎರಡು ಕಾರಣಗಳು ಸೇರಿವೆ. ಒಕ್ಕೊರಲ ಗೀತೆ, ಶ್ರುತಿಬದ್ಧವಾದ ಲಹರಿ ಗಳು ಮನಸ್ಸನ್ನು ಒಂದೇ ಕಡೆಗೆ ಸೆಳೆಯುವುದರಿಂದ ಶಾಂತಿ ಬರುತ್ತದೆ; ಲಾಲಿಯ ಅರ್ಥ ತಿಳಿಯದೆ ಕೂಸಿಗೆ ನಿದ್ರೆತರುವ ಶಾಂತಿಯಂತೆ. ಇನ್ನೊಂದು- ಗೀತದಿಂದ ಪ್ರೇರಿತವಾಗುವ ಶಾಂತಿ. ಆ ಗೀತದಿಂದ ನೀವು ರಾಮ, ಕೃಷ್ಣ ರನ್ನು ಕಿತ್ತರೂ ಆ ಶಾಂತಿ ಬರುತ್ತದೆ; ಅದನ್ನು ಮಾತಿನ ಬದಲು ವಾದ್ಯದಲ್ಲಿ ನುಡಿಸಿದರೂ ಆಗಲೂ ಶಾಂತಿ ಬಂದೀತು. ಅದಕ್ಕೆ ಕಾರಣವಾದದ್ದು-ಆ ಗೀತದ ರೂಪ. ಆ ಗೀತದ ರೂಪಕ್ಕೆ ಕಿವಿಯೊಡ್ಡಿ ಸುಖಿಸಬಲ್ಲ ಕಿವಿಯ ಸಂಸ್ಕಾರ.

ಭಜಕನು "ಅಮಲ ಮುಖ ರಾಮ ಭಜನ ಕೋ ದಿಯಾ" ಎಂದು ಆಲಪಿಸುವಾಗ, ಆ ಮಾತುಗಳ ಸೆನವರಿಕೆ, ನಮ್ಮ ಅನುಭವಗಳು, ರಾಮನ ವಿಷಯದಲ್ಲಿ ಮನಸ್ಸೋಡಿಸಲು ಸಹಾಯ ಮಾಡಬಹುದು. ಬರಿಯ ರಾಗ ಲಹರಿಯೂ ತನ್ನ ಸ್ವಭಾವ ಶಕ್ತಿಯಿಂದ ನಮ್ಮ ತಲೆದೂಗಿಸಬಹುದು. ಆದು ದರಿಂದ ನಮಗೆ ಭಜನೆಯಿಂದ ದೊರೆಯುವ ಶಾಂತಿಯು 'ರಾಮ'ನಿಂದ ದೊರೆಯಿತೇ, ರಾಮನಾಮಕ್ಕೆ ಬಳಸಿದ ನಾದದಿಂದ ದೊರೆಯಿತೇ–ಎಂದು ಮೊದಲು ನಿರ್ಣಯಿಸುವುದು ಲೇಸು.

ಮುಂಜಾನೆಯ ಹಕ್ಕಿಗಳ ಉಲಿ, ಹರಳುಗಲ್ಲಿನ ಮೇಲೆ ಓಡುವ ನದಿ ಯೊಂದರ ನಾದ, ಸಂಜೆಯ ಗಾಳಿಗೆ ಮಿದುವಾಗಿ ಉರುಳುವ ಕಡಲಿನ ಮೊರೆತ, ಅಲೆಗಳು ಮರಳ ದಿನ್ನೆಯನ್ನೇರಿ ತಿರುಗಿ ಕಡಲನ್ನು ಸೇರುವ ಜೋಗುಳ—ಇವೆಲ್ಲ ನಮ್ಮ ಅನಂತ ಜೀವನದ ಕಲ್ಪನೆಯಿಂದ ಸಂಸ್ಕಾರ ಗೊಂಡ ಕಿವಿಯ ಮೇಲೆ, ಭಜನೆ ಕೀರ್ತನೆಗಳು ಮಾಡುವುದರ ಇಮ್ಮಡಿ ಕೆಲಸವನ್ನು ಮಾಡಬಹುದು. ಏನಿಲ್ಲವಾದರೆ–ತಾಯಿ ಮಗುವಿನ ಮುಂದೆ ಹಾಡುವ ಜೋಗುಳದ ಶಾಂತಿಯನ್ನಾದರೂ ಅವು ನಮಗೆ ಉಣಿಸಬಹುದು.

### ಇಂದ್ರಿಯಾನುಭವ

ಶಾಂತಿ ಸಾಧನವು ಮೂಲತಃ ನಮ್ಮ ಗುರಿಯಾದಲ್ಲಿ—ಇಂದ್ರಿಯ ಗಮ್ಯವಾದ ಶಕ್ತಿಗಳು–ಕಿವಿ, ಕಣ್ಣು, ನಾಲಿಗೆ ಮೂಗು, ತ್ವಚೆಗಳೇ ಅದನ್ನು ತಂದು ಕೊಡಬಲ್ಲುವು. ಇವುಗಳ ಅನುಭವವು ನಮಗೆ ಎಷ್ಟೆಷ್ಟು ಸೂಕ್ಷ್ಮ ವಾಗಿ ಉಂಟಾಗುತ್ತದೋ ಅಷ್ಟಷ್ಟು ತೀಕ್ಷ್ಣ, ಸವಿಸ್ತಾರ, ಸೂಕ್ಷ್ಮವಾದ ಸುಖಗಳ ಕಲ್ಪನೆಯಾಗುತ್ತದೆ. ನಮ್ಮ ಇಂದ್ರಿಯಗಳಿಗೆ ದೊರೆತ ಅನುಭವ, ನಮ್ಮನ್ನು ಜಗತ್ತಿನ ಒಡವೆಗಳ, ಎಷ್ಟೆಷ್ಟು ಹೆಚ್ಚಿನ ಪರಿಚಯ ಮಾಡಿಕೊಟ್ಟ ವೆಯೋ, ಅಷ್ಟಷ್ಟು ಭಾವನೆಗಳೂ ಕೆದರುವುವು. ಇವೆರಡರ ಮೇಳದಿಂದ ಶಾಂತಿ, ಆಹ್ಲಾದ, ತೃಪ್ತಿ ಇವುಗಳ ವಿವಿಧ ಪಾಕಗಳನ್ನು ನಾವು ಪಡೆಯ ಬಹುದು.

### ಇಲ್ಲಿಂದ ತಪೋರಾಜ್ಯಕ್ಕೆ

ಅಮಾವಾಸ್ಯೆಯ ಕಗ್ಗತ್ತಲಲ್ಲಿ, ಬಾನಿಗೆ ಮುಖಮಾಡಿಕೊಂಡು ಮಲ ಗಿದ್ದು, ಚುಕ್ಕಿಗಳ ವಿಸ್ತಾರ ರಾಜ್ಯವನ್ನು ನೋಡುತ್ತಿರಲು ಭವ್ಯಶಾಂತಿಯ ಅನುಭವವಾಗುವುದಿಲ್ಲವೆ? ಕಡಲಿನ ಮಳಲ ದಂಡೆಯ ಮೇಲೆ ಕುಳಿತು

ದಿಗಂತದ ಹರಹನ್ನೆಲ್ಲ ತುಂಬುವ ಸಾಗರದ ನೀಲಿಮೆಯನ್ನು ಕಂಡರೆ ಎದೆ ತುಂಬುವುದಿಲ್ಲವೆ? ಬಾನನ್ನು ಮುಟ್ಟುವ ಬೆಟ್ಟದ ಇದಿರಿನಲ್ಲಿ ನಿಂತು, ಅದರ ಉನ್ನತಿಯನ್ನು ನೆನೆಯುತ್ತಿದ್ದರೆ ಮನಸ್ಸಿಗೆ ಯಾವುದೋ ಒಂದು ಬಗೆಯ ಗಭೀರ ಶಾಂತಿಯ ಬೋಧೆಯಾಗುವುದಿಲ್ಲವೆ? ಸೃಷ್ಟಿಯ ಅಪಾರತೆಯನ್ನು ನೋಡಬಲ್ಲ ಕಣ್ಣನ್ನು ಬೆಳೆಯಿಸಿಕೊಂಡಲ್ಲಿ, ನಾವು ಶಾಂತಿಯನ್ನು ಹೊಂದಲಾರೆವೇ? ಒಮ್ಮೆ ನೋಡಿದ ಅಂಥ ಅನುಭವಗಳನ್ನು ನೆನೆದಾಗಲೆಲ್ಲ, ಅದೇ ಭವ್ಯತೆಯ ಪುನರ್‌ಸೃಷ್ಟಿ ಮನದ ಎದುರಿಗೆ ನಿಂತು ಆನಂದವನ್ನುಂಟು ಮಾಡುತ್ತದೆ; ಶಾಂತಿಯನ್ನು ಕೊಡುತ್ತದೆ. ಜೀವನದ ವಿಸ್ತಾರವಾದ ಯಾವುದೊಂದು ನೋಟವೂ ಪುಟ್ಟ ವಿಷಯಗಳಿಂದ ನಮ್ಮ ಮನಸ್ಸನ್ನು ಸೆಳೆದು, ಇನ್ನಾವುದೋ ಭವ್ಯತೆಯ ದರ್ಶನ ಮಾಡಿಸಿಕೊಡಬಲ್ಲುದು. ಈ ಬಗೆಯ ಸೊಗಸು, ಆನಂದ, ಶಾಂತಿಗಳು-ಗೀತ, ಭಜನೆಗಳಿಂದ ದೊರಕುವ ಶಾಂತಿಗೆ ಕಡಮೆಯಾದುವಲ್ಲ. ದೈವ ಚಿಂತನೆಯಿಂದಲೂ ಮನಸ್ಸು ಹೆಚ್ಚಿನ ಶಾಂತಿಯನ್ನು ಪಡೆಯಲು—ಪ್ರಕೃತಿಯ ಅನೇಕ ಭವ್ಯವಸ್ತುಗಳ, ಅನುಪಮ ಸೊಗಸುಗಳ ಪರಿಚಯ ನಮಗಾಗಬೇಕು. ಬರಿಯ ಚೆಂದನದ ಗೊಂಬೆಗಿಂತ ಹೆಚ್ಚಿನ ಸುಂದರ ಒಡವೆಯನ್ನು ಕಾಣದವನು, ದೈವಮೂರ್ತಿಯ ಭವ್ಯ ಸೊಗಸಿನ ಕಲ್ಪನೆಯನ್ನು ತಂದುಕೊಳ್ಳಲು ಅಶಕ್ತನಾಗುತ್ತಾನೆ. ಸೃಷ್ಟಿಯ ಸವಿಯುಲಿಗಳ, ಇಂಚರಗಳ ಪರಿಚಯ ಪಡೆಯದವನು ದೈವವಾಣಿಯ ಸವಿಯನ್ನು ತಂದುಕೊಳ್ಳಲಾರನು; ಅಲ್ಲಿ ಬೆಳೆದ ಬದುಕಿನ ಮೇಲಿಂದಲೇ, ನಮ್ಮ ತಪೋರಾಜ್ಯದ ಬದುಕು ಬೆಳೆಯಬೇಕು. ಇಲ್ಲಿಯ ಬದುಕು ನಿರಸತೆ, ನಿರ್ಗಂಧತೆಗಳ ಮೇಲೆ ಕಟ್ಟಲ್ಪಟ್ಟುದಾದರೆ ತಪೋ ರಾಜ್ಯದ ಸವಿ ಮಸಣದ ಪ್ರತೀಕವಾಗಬಹುದು.

ವಿಸ್ತೃತವಾದ ಬದುಕಿನ ಪರಿಚಯವು ಜೀವನಕ್ಕೆ ತಂದುಕೊಡಲಾರದ ಸುಖವನ್ನು, ಬದುಕಿಂದ ಹಿಂದೆಗೆದ ಮನಸ್ಸಿನ ತಪಸ್ಸು ಸಹ ತಂದುಕೊಡಲಾರದು. ಇಹದಲ್ಲಿ ರೂಪ ರಸ ಗಂಧಗಳು ಅಡಿಗಲ್ಲಾಗಿ ದೊರೆಯದೆ ಹೋದರೆ, ಅದರ ಮೇಲೆ ಯಾವೊಂದು ಸೊಗದ, ಸವಿಯ 'ಪರ'ವನ್ನು ನಾವು ಕಟ್ಟಲಾರೆವು.

## ೪. ಬಾಳ್ವೆ ಸ್ವೀಕಾರಕ್ಕಿದೆ, ನಿರಾಕರಣೆಗಲ್ಲ

**ಬದುಕಿನ ಮಿತಿಯಿಂದ**

ಜೀವನದ ಸಮನಾದ ಪರಿಚಯ ಮಾಡಿಕೊಳ್ಳದವನು, ಸಮನಾದ ದೇವನನ್ನೂ ಕಟ್ಟಲಾರನು ಎಂದದ್ದಾಯಿತು. ಮನುಷ್ಯರು ಕಟ್ಟಿದ ನೂರಾರು ದೇವತೆಗಳು ಹೇಗಿದ್ದಾರೆ? ದೇವದೇವರುಗಳ ಜಗಳ, ಅಸೂಯೆ, ಅವರ ಹೆಣ್ಮರುಳುತನ, ಅವರೊಳಗಿನ ಕೋಪಾಟೋಪಗಳನ್ನು ಸಾರುವ ಪುರಾಣ ಗಳನ್ನು ಪರೀಕ್ಷಿಸಿದರೆ–ನಮ್ಮ ಪ್ರಪಂಚದ ದ್ವೇಷ, ಅಸೂಯೆ, ಕಾಮುಕತೆ ಗಳೇ ಹೀಗೆ ದೇವರ ಜೀವನವನ್ನು ಕಾಡಿವೆಯೆಂಬುದು ಸ್ಪಷ್ಟವಾಗು ತ್ತದೆ. ಬಹುವಾಗಿ ಯಾವತ್ತು ಜನಪದದ ದಂತಕತೆ (Legend), ಪುರಾಣ (Mythology)ಗಳೆಲ್ಲ ಇದೇ ಸಂಗತಿಯನ್ನು ಹೇಳುತ್ತವೆ. ದೇವರ ಈ ಮಿತಿ ನಮ್ಮ ಬದುಕಿನ ಮಿತಿಯ ಪರಿಣಾಮ.

**ಬದುಕು ವಿಕಸಿಸಲು**

ಹೀಗಿರುತ್ತ—ನಮ್ಮ ಪ್ರಪಂಚದ ಜೀವನವು, ನಮಗೆ ದೊರಕಿಸಿ ಕೊಡುವ ಅನುಭವಗಳು ತೀರ ಆವಶ್ಯಕವಾದುವು! ಬಾಳ್ವೆ ಬಂದಿರು ವದೇ ನಮ್ಮ ಪ್ರಯೋಜನಕ್ಕೆ. ಅದರಿಂದ ಲಾಭವಿದೆಯೆಂದೇ ನಾವು ಇಲ್ಲಿ ದ್ದೇವೆ; ಬಾಳ್ವೆ ಬಂದಿರುವುದು ಅದರ ನಿರಾಕರಣೆಗಲ್ಲ. ವ್ಯಕ್ತಿ ಜೀವನದ ವಿಕಾಸ ಬದುಕುವುದರಿಂದಲೇ ನಡೆಯಬೇಕಾಗುತ್ತದೆ. ಬದುಕಿನಲ್ಲಿ ಜೀವಿ ಎಷ್ಟೆಷ್ಟು ಹೆಚ್ಚಾಗಿ, ಸೂಕ್ಷ್ಮವಾಗಿ, ಬದುಕನ್ನು ಸವಿಯುವ ಶಕ್ತಿಗಳನ್ನು ಬೆಳೆಯಿಸಿಕೊಳ್ಳುತ್ತಾನೋ—ಅಷ್ಟಷ್ಟು ಹೆಚ್ಚಾಗಿ ಆತ ತನ್ನ ಅನುಭವ ಗಳಿಂದ ಪರಿಣಾಮಗೊಳ್ಳುತ್ತಾನೆ. ಅವನು ತನ್ನ ಶಕ್ತಿಗಳನ್ನು ಬೆಳೆಯಿಸಿ ಎಷ್ಟೆಷ್ಟು ವಿಸ್ತಾರವಾದ ಬಾಳ್ವೆಗೆ ಎದೆಯೊಡ್ಡುತ್ತಾನೆಯೋ ಅಷ್ಟಷ್ಟು ಬಹುಮುಖವಾದ, ಪ್ರಯೋಜನಕಾರಿಯಾದ 'ಅನುಭವ'ಗಳನ್ನು ಪಡೆಯ ಬಹುದು. "ವಿಸ್ತಾರವಾದ ಬಾಳ್ವೆ" ಎಂಬ ಮಾತನ್ನು ವಿವರಿಸಬೇಕಾಗು ತ್ತದೆ. ನಮಗೆ ವಿಶ್ವದ ಇತರ ಜೀವಿ, ಒಡವೆಗಳೊಡನೆ ಹೆಚ್ಚಾದ ಪರಿಚಯವುಂಟಾಗಲು ಅವಕಾಶ ಕೊಡುವ ಎಲ್ಲ ನಡತೆ, ಪ್ರಸಂಗ ಗಳನ್ನು ನಾವು ವಿಸ್ತಾರವಾದ ಬಾಳ್ವೆಯೆಂದು ತಿಳಿಯಬೇಕು. ಇನ್ನು "ಅನುಭವ" ಎಂಬ ಮಾತನ್ನು ವಿಶದಗೊಳಿಸುವ. ವಸ್ತುಗಳ ರೂಪದಿಂದ,

ಆಕಾರ, ಬಣ್ಣಗಳಿಂದ ದೊರೆಯುವ ಯಾವತ್ತು ಪ್ರೇರಣೆಗಳೂ ಸೌಂದರ್ಯಾನುಭವಗಳೇ. ಗೀತ, ಗಾನ, ಆರ್ಭಟೆ, ಅಬ್ಬರ ಮೊದಲಾದ ಎಲ್ಲ ಬಗೆಯ ಧ್ವನಿಗಳಿಂದ ಪ್ರೇರಿತವಾಗುವ ಭಾವನೆಗಳು—ಶ್ರವಣದ ಅನುಭವಗಳು. ಇದರಂತೆ ರಸನೆಯ ಅನುಭವಗಳು, ಗಂಧದ ಅನುಭವಗಳು, ಸ್ಪರ್ಶದ ಅನುಭವಗಳೂ ಇವೆ. ಈ ಎಲ್ಲ ಬಗೆಯ ಪ್ರೇರಣೆಗಳು ಮನಸ್ಸಿನ ಮೇಲೆ ಬಿಡಿಯಾದ ಇಲ್ಲವೆ ಸಾಮೂಹಿಕವಾದ ಪರಿಣಾಮ ಉಂಟುಮಾಡುತ್ತವೆ. ಭಾವನೆಗಳನ್ನೂ, ಯೋಚನೆಗಳನ್ನೂ, ತರ್ಕಗಳನ್ನೂ ಪ್ರೇರಿಸುತ್ತವೆ. ಅವುಗಳ ಪರಿಣಾಮವಾಗಿ–ಅನುಕಂಪ, ಕರುಣೆ, ಶಾಂತಿ, ಆಹ್ಲಾದ ಮೊದಲಾದ ಹೆಚ್ಚಿನ ಅನುಭಾವಗಳಿಗೆ ಕಾರಣವಾಗುತ್ತವೆ. ಒಳಗಿನ ಈ ಎಲ್ಲ ಸುಖ, ಸಂತೋಷ, ತಳಮಳವೆಂಬುವು ಸ್ವತಂತ್ರವಲ್ಲ. ಹೃದಯ ರಾಜ್ಯದ ಈ ಪರಿಣಾಮಗಳನ್ನೇ ನಾವು "ಅನುಭಾವ"ವೆನ್ನಬಹುದಾದಲ್ಲಿ, ಅವನ್ನು ನಿರ್ಮಿಸಲು ಮನಸ್ಸೂ, ಅದನ್ನು ಕೆಲಸಕ್ಕೆ ತೊಡಗಿಸಲು ಇಂದ್ರಿಯಗಳೂ ನಮಗೆ ಅವಶ್ಯ. ವಿಶ್ವಕ್ಕೂ ವ್ಯಕ್ತಿಗೂ ಸಂಬಂಧವನ್ನು ಉಂಟುಮಾಡುವ ಹೆದ್ದಾರಿಯೇ ಅನುಭವ. ಇಂದ್ರಿಯಗಳನ್ನು, ಅವುಗಳ ಕೆಲಸವನ್ನು, ಅವುಗಳ ವಿಹಾರ ಕ್ಷೇತ್ರವನ್ನು ಅಲ್ಲಗಳೆಯುವಾತ ತನಗೇ ತಿಳಿಯದಂತೆ ಹೃದಯ ರಾಜ್ಯವನ್ನು ನಿರಾಕರಿಸುತ್ತಾನೆ. ಎಂಥ ಭಕ್ತನೂ ದೈವಿಕನೂ, ವಿರಕ್ತನೂ–ಉಣ್ಣುತ್ತಾನೆ, ಉಡುತ್ತಾನೆ, ನೋಡುತ್ತಾನೆ, ಸವಿಯುತ್ತಾನೆ. ಆತ ತಾನು ಬದುಕನ್ನು ನಿರಾಕರಿಸುತ್ತಿದ್ದೇನೆ—ಎಂಬ ಬಾಯಿ ಮಾತನ್ನು ನುಡಿಯುತ್ತಲಿದ್ದರೂ, ಕಾರ್ಯರಾಜ್ಯದಲ್ಲಿ ಬೇರೆಯೆ ತೆರನಲ್ಲಿ ಬಾಳುತ್ತಿದ್ದಾನೆ. ಪ್ರಾಪಂಚಿಕನೆಂಬವನು ಎಂದೂ ಪೂರ್ಣ ಪ್ರಾಪಂಚಿಕನಾಗಿರಲು ಶಕ್ಯವಿಲ್ಲ; ವಿರಕ್ತನೆಂಬವನು ಸೇಕಡಾ ನೂರರಷ್ಟು ವಿರಕ್ತನಾಗಿರಲಾರ. ಹಾಗಿರಬೇಕಾದರೆ ನಮ್ಮ ಕಣ್ಣು ಕಾಣದಿರಬೇಕು, ಕಿವಿ ಕೇಳದಿರ ಬೇಕು, ಮೂಗು ಮೂಸದಿರಬೇಕು. 'ಇದ್ದರಾಯಿತು, ಇಲ್ಲದಿದ್ದರಾಯಿತು'-ಎನ್ನುವುದನ್ನು ವಿರಕ್ತಿಯೆಂದು ನಾವು ತಿಳಿಯಬೇಕಾಗಿಲ್ಲ. ಅಗ, ಇದ್ದಾಗ ಸವಿಯುವ ಶಕ್ತಿ ಶೂನ್ಯವಾಗುವುದಿಲ್ಲವಲ್ಲ.

**ಪರಾನುಭವ, ಸ್ವಾನುಭವ**

ಮನುಷ್ಯನ ಅನುಭವಗಳು ಎರಡು ಬಗೆಯಿಂದ ಹೆಚ್ಚುತ್ತವೆ. ತಾನೇ ಬದುಕಿನ ಸಂಸರ್ಗದಿಂದ ದೊರಕಿಸಿಕೊಳ್ಳುವ ಅನುಭವಗಳು ಒಂದು ಬಗೆ.

ಇನ್ನೊಂದು ಬಗೆ–ಪರಿಣತರ ಅನುಭವಗಳನ್ನು ಓದಿ, ಕೇಳಿ, ತಿಳಿಯುವುದು. ಆದರೆ ಈ ಎರಡನೆಯ ವರ್ಗದ ಅನುಭವ ನಮಗೆ ಉಪಯುಕ್ತವಾಗಲು, ನಮ್ಮಲ್ಲಿ ಅರಗಲು, ಸ್ವಂತ ಅನುಭವ ಸಾಮ್ಯವಾದರೂ ಇರಬೇಕು. ನಮ್ಮ ಅನುಭವಗಳಿಗೂ ನಾವು ಕೇಳಿ ತಿಳಿಯುವ ಅನುಭವಗಳಿಗೂ ಹೊಂದಿಕೆಯಿಲ್ಲವಾದರೆ, ಅವುಗಳು ನಮಗೆ ಹೆಚ್ಚಿನದೇನನ್ನು ಕೊಡಲಾರವು. ಗ್ರಹಗಳಲ್ಲಿ ಜೀವಕೋಟಿಯಿದೆಯೆಂದರೂ, ಅದೇನೆಂದು ನಮಗೆ ತಿಳಿಯದ ಮಾದರಿಯಲ್ಲಿ ಈ ಅನುಭವಗಳಾದಾವು. ಅನುಭವಪುಷ್ಟನಾದವನು ಪರರ ಅನುಭವಗಳನ್ನು ತೂಗಿ, ತನಗಿಲ್ಲದ ಅನುಭವಗಳನ್ನು ತಿಳಿಯಲು ಪೂರ್ವಸಿದ್ಧತೆ ಪಡೆಯಬಹುದು. ಬದುಕಿನ ಬೇರೊಂದು ಅನುಭವದಿಂದ, ತನಗೆ ಬಂದ ಅನುಭವದ ತೂಕವನ್ನು ಇನ್ನೂ ಚೆನ್ನಾಗಿ ಮಾಡಿಕೊಳ್ಳಲು ಸಹಾಯವಾಗಬಹುದು.

### ವಿಶಾಲ ಜೀವನ

ನಮಗೆ ಬದುಕಿನಿಂದ ಉಪಯೋಗವಾಗಬೇಕಾದರೆ, ಜ್ಞಾನ ದೊರೆಯಬೇಕಾದರೆ, ನಮ್ಮ ಜೀವನ ಆದಷ್ಟು ವಿಶಾಲವಾಗಬೇಕು. ನಮ್ಮನ್ನು, ನಮ್ಮ ಮನೆಯವರನ್ನು, ಸಾಮಾಜಿಕರನ್ನು ಮೀರಿಸಿ, ಅದು ಮನುಷ್ಯಕುಟುಂಬಕ್ಕೇ ಹರಿಯಬೇಕು. ಅಲ್ಲಿಯೂ ಮೇರೆಯನ್ನು ಹೊಂದದೆ, ಜೀವಕುಟುಂಬಕ್ಕೂ, ಯಾವತ್ತು ಸೃಷ್ಟಿಗೂ ವಿಶಾಲಿಸಲು ಪ್ರಯತ್ನಿಸಬೇಕು. ವಿಶ್ವದ ಗುಟ್ಟೆಲ್ಲ–ಇದರಿಂದ ಕರಗತವಾಗುವುದೆಂಬ ಆಸೆಯು ಬೇಡ. ನಮ್ಮ ಶಕ್ತಿಗಳಿಗೂ ಮಿತಿಯಿದೆ. ಅವುಗಳ ಎಟುಕಿನ ದೂರಕ್ಕೂ ಮಿತಿಯಿದೆ. ಆ ದೂರದ ತನಕ ಹೋಗಲು ನಾವು ಹಿಂಜರಿಯಬೇಕಾಗಿಲ್ಲ. ಅದಕ್ಕೂ ಮೀರಿದ ರಾಜ್ಯವನ್ನು ಬಿಡುವ.

### ಬೇಕಾರ ಸಂಸಾರ

ಹೀಗೆ ಬದುಕಿ ತಿಳಿಯಬಹುದಾದ ಪ್ರಪಂಚವನ್ನು ಕಾಣಬಯಸದ ವ್ಯಕ್ತಿ ಸಂಕುಚಿತ ವ್ಯಕ್ತಿಯು; ಅವನ ಜೀವನ ಬರಡಾಗುತ್ತದೆ. ಪ್ರಪಂಚದಲ್ಲಿ ಬಾಳಲು ಅವಕಾಶ ದೊರಕಿರುವಾಗ, ತಿಳಿಯಲು ಸಾಧನಗಳಿರುವಾಗ, ಅದೇ ವ್ಯರ್ಥವೆನ್ನುವುದು ಏತರ ಮಾತು? 'ಪ್ರಪಂಚ ಒಂದು ಬಂಧನ' 'ಅಲ್ಲಿರುವುದೇ ಒಂದು ತೊಳಲಾಟ' ಎನ್ನುವುದು ಜಾಣ್ಮೆಯೇ? ದೇವರನ್ನು ಒಪ್ಪುವವರು–ಈ ತೊಳಲಾಟಕ್ಕೆ ದೇವರೇ ನಮ್ಮನ್ನು ತೊಡಕಿಸಿದನೆಂದರೆ

ಏನು ಭೂಷಣ? ನಮ್ಮ ಕರ್ಮ ಇದಕ್ಕೆ ಕಾರಣವೆಂದರೆ, ಆಗ ಕರ್ಮಕ್ಕೆ ಕಾರಣನಾದ ದೇವರೇ ಅದಕ್ಕೂ ಕಾರಣನೆನ್ನುವ ವಿಚಾರ ಸ್ಥಾಪನೆಯಾಗದೇ? ಸೃಷ್ಟಿಯ ನಿರ್ಮಾಣಕನಿರುವಲ್ಲಿ ಅನವಶ್ಯಕವಾದ ಇಲ್ಲವೆ ಕಿತ್ತೊಗೆಯ ಬೇಕಾದ ಸಂಸಾರವನ್ನು ಅವನು ರಚಿಸಿದ ಎನ್ನುವುದು ಸರಿಯಲ್ಲ. ಅವನು ಬದುಕೆಂಬ ಮಾಯೆಯನ್ನು ನಮ್ಮ ಮುಂದೆ ಹರಡಿರುವನಾದರೆ, ಅವನೊಬ್ಬ ಉಪದ್ವ್ಯಾಪಿಯೆನ್ನಿಸಿಕೊಂಡಾನು.

**ಅನಾನುಕೂಲತೆ**

ವ್ಯಕ್ತಿ, ಪ್ರಪಂಚದೊಡನೆ ವಿಹರಿಸುವ ಬಗೆಯಲ್ಲಿ ಕೆಡುಕಿರಬಹುದು. ಅದರಿಂದ ಅವನಿಗೆ ಅನೇಕ ತೊಡಕು, ದುಃಖಗಳು ಬರಬಹುದು. ವ್ಯಕ್ತಿಯು ಯಾವ ಸಮಾಜದ ಅಂಗವೋ ಅದು ವ್ಯವಹರಿಸುವ ರೀತಿಯೂ ತಪ್ಪಾಗಿದ್ದರೂ ಇದೇ ಪರಿಣಾಮವಾಗಬಹುದು. ಈ ದೊಡ್ಡ ವಿಶ್ವದ ವ್ಯಾಪಾರವು ನಮ್ಮ ತಿಳಿವಿಗೆ ಸಿಗದಿರಬಹುದು. ಇಂಥ ಕಾರಣಗಳಿಂದ ಬದುಕು ನಮಗೆ ಅರ್ಥವಾಗದೆ ಹೋದರೆ, ಇಲ್ಲವೆ ಬದುಕಿನಲ್ಲಿ ಕ್ಲೇಶ ಉಂಟಾದರೆ, ಅದರಿಂದ ಬದುಕೇ ನಿರರ್ಥಕ, ಮಾಯೆ; ಆದರಲ್ಲಿ ಮನವಿರಿಸುವುದು ತಪ್ಪು–ಎಂದು ತೀರ್ಮಾನಿಸಬೇಕಿಲ್ಲ.

**ಸಿಗದ್ದು ಹುಳಿಯೋ**

ವಿಶ್ವದ ಇಂದಿನ ವ್ಯಾಪಾರವನ್ನೇ ಎಣಿಸುವ. ಅದು ಎಷ್ಟು ದೊಡ್ಡದಾಗಿಲ್ಲ. ಅದರಲ್ಲಿ ನಮಗೆ ಕಾಣಿಸುವುದು ಎಷ್ಟು ಸ್ವಲ್ಪ; ಕಾಣಿಸದೆ ಇರುವ ಅಂಶ ಎಷ್ಟು ಅಧಿಕ. ಅವುಗಳಲ್ಲಿ ಕಾಣಿಸುವ ಸಂಗತಿಗಳಲ್ಲೂ ನಮಗಿರುವ ಪರಿಚಯ ಅಷ್ಟು ಕಡಿಮೆಯಾಗಿದೆ. ನಮ್ಮ ಕಾಣುವ ಕಣ್ಣುಗಳಲ್ಲೂ ಅಷ್ಟು ಅಲ್ಪ ಶಕ್ತಿಯಿದೆ. ಭೂಮಿಯ ಎಷ್ಟೋ ತೀರ ಸಮೀಪದ ಒಡವೆಗಳೂ ಅವಕ್ಕೆ ಕಾಣವು. ಕೆಲವು ಬೆಳಕುಗಳು ಕಂಡರೆ, ಕಾಣದ ಬೆಳಕುಗಳು ಬಹಳ. ವಸ್ತು ತೀರ ಸೂಕ್ಷ್ಮವಾದರೂ ಕಾಣಿಸದು. ತೀರ ದೂರವಾದರೂ ಕಾಣಿಸದು. ನಮ್ಮ ಶಕ್ತಿಯ ಅಳವಿಗೆ ಬರುವುದೂ, ಬಂದುದೂ, ತೀರ ಸ್ವಲ್ಪ ಭಾಗವಾಗಿರುವಾಗ, ಅದರ ಮೇಲಿಂದಲೇ–ಬದುಕು ಮಾಯೆ, ಬಂಧನ–ಎಂದು ನಿರ್ಧರಿಸುವ ಆತುರವೇಕೆ? ನಮಗೆ ಯಾವುದೋ ವಸ್ತು ದೊರೆಯಲಿಲ್ಲ, ನಮಗೆ ಯಾವುದೋ ಕಷ್ಟಕರ—ಎಂಬುದರ ಮೇಲಿಂದ ಬದುಕು ಬಂಧನವೆನಿಸಬೇಕೇ! ನಿರರ್ಥಕವೆನಿಸಬೇಕೇ!

ಇಂದಿನ ನಮ್ಮ ಬದುಕೂ, ನಮಗೆ ಅಪೂರ್ಣವಾಗಿ ಕಾಣಿಸುವ ವಿಶ್ವವೂ ನಿನ್ನೆಯ ಮೇಲೆ ಹೊಂದಿದೆ. ಆ ನಿನ್ನೆಯ ದೃಶ್ಯವೂ ನಮಗೆ ತಿಳಿಯದಂಥದು. ಆ ನಿನ್ನೆಯ ಕಲಾಪಗಳೂ ಬಹುವಾಗಿ ಅರಿವಿಗೆ ಬಾರದಷ್ಟು ವಿಸ್ತಾರವಾದುವು. ಹೀಗಿರುವಲ್ಲಿ—ಇವೆಲ್ಲ ಬಂಧನ, ಸಿಂಧ್ಯ ಎನ್ನುವುದೇ! ಅವುಗಳು ಎಂಥವು, ನಮಗೂ ಅವಕ್ಕೂ ಏನು ಸಂಬಂಧ, ಆ ವಿಶ್ವದ ವಿಸ್ತಾರಣದಲ್ಲಿ ನಾವು ಹೇಗಿದ್ದರೆ ಒಪ್ಪು—ಎಂಬುದನ್ನು ತಿಳಿಯಲೆತ್ನಿಸುವುದೇ ಸಮನಾದ ಮಾರ್ಗವಲ್ಲವೇ? ಹಿಂದಿದ್ದ ಜೀವಕೋಟಿಗಳು ಇಂದಿನ ತನಕ ವಿಕಾಸಗೊಂಡು ಬಂದ ಬಗೆಯು ನಮಗೆ ತಿಳಿದಲ್ಲಿ, ನಾಳಿನ ಬಾಳು ಅದರಿಂದ ಸೂಚಿಸೀತು.

## ಬದುಕಿನ ಪ್ರಮಾಣ

ಬದುಕಿನ ಪ್ರವಾಹ ಬಲು ಹಿರಿದು. ಬದುಕನ್ನು ನಿರಾಕರಿಸಿ ಮೂಕರಾಗಬಲ್ಲ, ಜಡರಾಗಬಲ್ಲ ಎಷ್ಟೋ ಪ್ರಾಣಿಗಳನ್ನು ಅದು ಕಳೆದುಕೊಂಡೂ ಮುಂದಕ್ಕೆ ಸಾಗಬಲ್ಲುದು. ಈ ವಿಶ್ವದ ಓಟದಲ್ಲಿ, ನಮ್ಮ ಭೂಮಿಯೇ ಇನ್ನೊಂದು ಲೋಕಕ್ಕೆ ಡಿಕ್ಕಿ ಹೊಡೆದು, ಧೂಳಾದರೂ ವಿಶ್ವದ ಓಟ ಸಾಗಬಲ್ಲಷ್ಟು ದೊಡ್ಡದು. ಹೀಗಿರುತ್ತ—ಜೀವನ ನಿರಾಕರಣೆಯಿಂದ ಅದಕ್ಕೆ ಕೇಡುಬರಲಾರದು. ಎಲ್ಲಿಯತನಕ ನಾನು ಎಂಬ ವ್ಯಕ್ತಿ, ಅರಿವಿಂದ ಕೂಡಿದ್ದು ವ್ಯವಹರಿಸಬಲ್ಲುದೋ, ಈ ಜಡತೆಯಿಂದ ಅದರ ಸುಖಕ್ಕೆ, ತಿಳಿವಿಗೆ, ವಿಸ್ತರಣೆಗೆ-ಕುಂದಿದೆ. ನಾನೆಂಬ ಅರಿವುಳ್ಳ ಜೀವ ಬದುಕನ್ನು ನಿರಾಕರಿಸಿ ಪಡೆಯುವ ಸುಖಕ್ಕಿಂತ, ಮಿತ ಸಾಧನಗಳ ಸ್ವೀಕಾರಯೋಗ್ಯ ಹಾದಿಯೆಂದು ನನಗನಿಸುತ್ತದೆ. ಅದರಿಂದ ನಮ್ಮ ಮುಂದಿನ ಜೀವನದಲ್ಲಿನಮ್ಮಸೇವೆಯೂ ಸಲಬಹುದು.

## ಭ್ರಮೆಯೇ?

ಜೀವನವನ್ನು ಪರಮಾತ್ಮನ ಲೀಲೆಯೆಂಬುದಾಗಿ ಕರೆದಿದ್ದಾರೆ. ವ್ಯಕ್ತಿಯಾದವನು ಪ್ರಪಂಚದ ವ್ಯವಹಾರಗಳಲ್ಲಿ ಭಾಗಿಯಾಗುವುದರಿಂದ ತೊಳಲಾಟಕ್ಕೆ ಗುರಿಯಾಗುವನು—ಎಂಬುದನ್ನು ಇದರ ಜತೆಯಲ್ಲೇ ನಂಬುವೆವಾದರೆ, ಆಗ ಈ 'ಲೀಲೆ' ಎಂಬುದರ ಅರ್ಥವೇನು? ಬೆಕ್ಕಿಗೆ ಆಟ ಇಲಿಗೆ ಪ್ರಾಣಸಂಕಟ-ಎನ್ನಬಹುದಲ್ಲವೇ? ಆಗ ಈ ತೊಳಲಾಟ, ಇಲ್ಲಿನ ನೋವುಗಳು—ಎಂಬುವು ಬರಿಯ ಮಾಯೆ ಎಂದು ನಮಗೆ ಸಮಾಧಾನ ಹೇಳು

ವವರಿದ್ದಾರೆ. ನಿಜ, ಎಲ್ಲಿಯತನಕ ಅನುಭವಿಸುವ ಪ್ರಾಣಿಯ ಪಾಲಿಗೆ ಈ ನೋವು ನಿಜವೆನಿಸುತ್ತಿರುವುದೋ, ಭ್ರಮೆಯೆನಿಸದೋ, ನೋವು ಕೊಡುವವರಿಗೆ ಅದು ಭ್ರಮೆ, ಮಾಯೆಗಳೆಂದು ತಿಳಿದರೂ ತಿಳಿಯದಿದ್ದರೂ ಒಂದೇ.

**ಸಲ್ಲುವುದರಿಂದ ಹುಟ್ಟು**

ನಾವು ಹುಟ್ಟಿದ್ದೇವೆ–ಎನ್ನುವ ಒಂದೇ ಕಾರಣದಿಂದ ನಮ್ಮ ಹುಟ್ಟು ನಮಗೆ ಪ್ರಯೋಜನಕಾರಿಯೆಂದು ತಿಳಿಯಬೇಕು. ನಾವು ಯಾವ ಜೀವನದ ಅಂಶವಾಗಿರುವೆವೋ ಅದಕ್ಕೂ ನಮ್ಮಿಂದ ಪ್ರಯೋಜನವಿದೆ. ಜೀವಗಳು ಇಲ್ಲಿ ಬೆಳೆಯಬೇಕು; ಇಲ್ಲಿನ ಬದುಕಿನಿಂದ ನಾವು ಲಾಭಗಳಿಸಬೇಕು–ಎಂದು ತಿಳಿಯುವುದರಿಂದಲೇ ಹೆಚ್ಚಿನ ಹಿತವಿದೆ. ಇಲ್ಲಿಗೆ ನಾವು ಸಲ್ಲದ ಜೀವರಾದರೆ, ಇಲ್ಲಿ ಹುಟ್ಟುತ್ತಿರಲಿಲ್ಲ; ಎಲ್ಲಿಗೂ ಸಲ್ಲದವರಾದರೆ ಹುಟ್ಟೂ ಬರುತ್ತಿರಲಿಲ್ಲ. ಈ ವಿಶ್ವದ ವ್ಯಾಪಾರ ನೀರಮೇಲಣ ಗುಳ್ಳೆಯಂತೆ ಕ್ಷಣಿಕವಾಗಿರಬಹುದು; ಮೂರು ನಿಮಿಷಗಳದ್ದಿರಬಹುದು. ಅದರಿಂದ ಅವು ನಿಷ್ಪ್ರಯೋಜಕವಾಗಬೇಕಿಲ್ಲ. ನೂರು ವರ್ಷದೊಳಗೆ ಸವೆಯುವ ಕಾಯ ನಮಗಿರುವುದಾದರೆ, ಅಷ್ಟರೊಳಗೆ ನಾವು ಸಾಧಿಸಬಹುದಾದ ಕೆಲಸಗಳಿಗಾಗಿ ಅದು ಇದೆ ಎಂದು ಅರ್ಥ. ಅಂಥ ಹತ್ತುನೂರು ವರ್ಷ ತಾಳಿಕೆಯ ಜೀವಿಗಳು, ಮೂರು ದಿನ ಬದುಕಬಲ್ಲ ಕ್ರಿಮಿಗಳು, ತಮ್ಮ ದೀರ್ಘಕಾಲದ ಸಂತಾನಯಾತ್ರೆಯಿಂದ ಚಿರಂತನವಾದ, ಕಲ್ಪನೆಯ ಪಾಲಿಗಾದರೂ ಚಿರಂತನ ಎನಿಸುವಷ್ಟು ದೀರ್ಘವಾದ, ಏನನ್ನೋ ಕಟ್ಟುತ್ತಿದ್ದಾವೆ. ಮಣ್ಣಿನ ಇಟ್ಟಿಗೆ ಒಂದೇ ಗೇಣುದ್ದದ್ದಿದ್ದರೂ–ಸಾವಿರಾರು ಇಟ್ಟಿಗೆಗಳಿಂದ ಒಂದು ಸೌಧ ಕಟ್ಟಬಹುದು. ಅದು ವ್ಯರ್ಥವೆನಿಸಬೇಕಿಲ್ಲ.

**ವೈಜ್ಞಾನಿಕ ದೃಷ್ಟಿ**

ಇಂದು ವಿಜ್ಞಾನ ಭೂಮಿಯ ರಚನೆ, ಜೀವಕೋಟಿಯ ವಿಕಾಸಗಳ ವಿಷಯದಲ್ಲಿ ತುಂಬ ತಿಳಿವು ಕೊಟ್ಟಿದೆ. ಇನ್ನೂ ಕೊಡಬಹುದು; ಅದಿನ್ನೂ ವಿಸ್ತೃತವಾಗಬಹುದು. ಕೊಟ್ಟ ತಿಳಿವಿನಿಂದ—ಭೂಮಿಯ ಯಾತ್ರೆಯಲ್ಲಿ ಜೀವಿಗಳ ಸಂತಾನಯಾತ್ರೆಯು ಒಂದು ಅಂಗವೆಂದೂ, ಯುಗಯುಗದ ಬದುಕಿನಿಂದ ಅವು ಇಂದಿನ ರೂಪ, ಸ್ಥಿತಿಗಳಿಗೆ ಪರಿಣಮಿಸಿವೆಯೆಂದೂ ಕಂಡುಬರುತ್ತದೆ. ವಿಶ್ವವಂತಿರಲಿ! ಬರಿಯ ಭೂಮಿಯ ವಿಸ್ತಾರ, ಗಹನತೆ, ಮಾಟಗಳೇ ಬಹು ಅಗಾಧವಾಗಿವೆ. ನಮ್ಮ ಎಟುಕಿಗೆ ಸಿಗಲಾರದಷ್ಟು

ವಿಶೇಷವಾಗಿವೆ. ಅವನ್ನು ತಿಳಿದರೆ-ಈ ಜೀವ ಜಗತ್ತಿನ ಓಟವೂ, ಅದಕ್ಕೆ ಹಿನ್ನೆಲೆಯಾದ ಜಡ ಜಗತ್ತಿನ ಆಟವೂ ಒಂದು ದಿನಕ್ಕಾಗಿಯೂ ಇಲ್ಲ, ಒಂದು ಜೀವಕ್ಕಾಗಿಯೂ ಇಲ್ಲ, ಹಿಂದಿನ ಯಾವತ್ತು ಜೀವಿಗಳಿಂದ ತೊಡಗಿ, ಇಂದಿನ ಜೀವನದ ಮೂಲಕ ಹರಿದು, ಎಂದಿನದೋ ಬದುಕಿನ ಕಡೆಗೆ ಅದು ಸಾಗುತ್ತಿದೆ. ಅದರಲ್ಲಿ ನಾವು ತಿಳಿದು ಮುಗಿಸದಷ್ಟು ಚೆಲುವಿದೆ, ಸತ್ಯವಿದೆ, ಗಹನತೆಯಿದೆ. ಆ ವಿಸ್ತೃತ ಜೀವನದ ಪ್ರವಾಹದಲ್ಲಿ ಎಷ್ಟು ಚೆನ್ನಾಗಿ ಬದುಕಬಹುದೋ ಅಷ್ಟು ಚೆನ್ನಾಗಿ ಬಾಳಿ ಬದುಕುವ. ಅದಕ್ಕಿಂತ ಹೆಚ್ಚಿನ ಕೆಲಸ ನಮಗಿರಲಾರದು.

### ಇಂದು ಕಳೆಯಲು ನಾಳೆ

ಈ ಮನುಷ್ಯ ಜೀವಿ ಎಂಬತ್ತು, ನೂರು ವರ್ಷಗಳ ಕಾಲ ಬದುಕಬಲ್ಲ ನಾದರೇನು? ಅಷ್ಟು ಕಾಲದಲ್ಲೇ ನಡೆಸಬಹುದಾದ ಜೀವನ ಸಾಕಷ್ಟು ದೊಡ್ಡ ದಾಗಿದೆ. ಅದರಿಂದ ಹೊಂದಬಹುದಾದ ಅನುಭವ ವಿಸ್ತಾರವಾಗಿದೆ. ಅದ ರೊಳಗೆ ಧುಮುಕಿ ತಿಳಿಯುವುದನ್ನೆಲ್ಲ ತಿಳಿಯುವ. ಇಂದನ್ನು ಮುಗಿಸಿದ ವನ ಪಾಲಿಗೆ, ನಾಳೆಯೊಂದು ಇರುವಲ್ಲಿ, ಆ ನಾಳೆ ಬಂದೇಬರುತ್ತದೆ.

### ಸತ್ಯ

ಜೀವನ ದಾರುಣವಾದುದು; ಅದು ಕಣ್ಣೀರಿನ ಸಂತೆ; ಅದನ್ನು ನೆಚ್ಚಿದ ವನಿಗೆ ದುಃಖವಲ್ಲದೆ ಸುಖವಿಲ್ಲ-ಎಂಬ ತೀರ್ಮಾನದಲ್ಲಿ ನನಗೆ ಒಪ್ಪಿಗೆಯಿಲ್ಲ. ಈ ಜೀವಕೋಟಿಯ ಜೀವವು ಅಷ್ಟು ಕೊಳೆ, ಕಿಲುಬುಗಳಿಂದ ತುಂಬಿರುವು ದಾದರೆ, ಅದು ಇಷ್ಟೊಂದು ದಿನ ಉಳಿಯಲಾರದು. ತನ್ನ ಸಾವನ್ನು ಎಂದೇ ತಂದುಕೊಳ್ಳುತ್ತಿತ್ತು. ಜೀವನ ಇನ್ನೂ ನಡೆದಿದೆ, ಉಳಿದಿದೆ, ಸಾಗು ತ್ತಿದೆ—ಎನ್ನುವುದರಿಂದ ಅದರಲ್ಲಿ ಹಾನಿಕಾರಕ ಶಕ್ತಿಗಳಿರಬಹುದಾದರೂ, ತಡೆಯಬಲ್ಲ, ತಾಳಬಲ್ಲ, ಉಳಿದು ಪ್ರವಹಿಸಬಲ್ಲ ಶಕ್ತಿಗಳೂ ಸಾಕಷ್ಟು ಬಲ ವತ್ತರವಾಗಿವೆಯೆಂದು ಊಹಿಸಬೇಕು. ನಾವು ಕಾಣುತ್ತಿರುವ ಜೀವನ ಶಕ್ತಿಗಳಲ್ಲಿ ಅಂತಹ ತಾಳಬಲ್ಲ ಶಕ್ತಿಗಳು ಇವೆಯೆಂದೂ-ಮಿಥ್ಯಕ್ಕಿಂತ ಸತ್ಯ ಅಧಿಕವಾಗಿದೆಯೆಂದೂ ತಿಳಿಯಬೇಕು.

### ಸಿಹಿ, ಕಹಿಗಳ ಪಾಕ

ಬದುಕು ಪೂರ್ಣ ಸಿಹಿಯೂ ಅಲ್ಲ, ಪೂರ್ಣ ಕಹಿಯೂ ಅಲ್ಲ. ಅವು ಗಳ ವಿವಿಧ ಪ್ರಮಾಣದ ಪಾಕ. ಕಹಿಯನ್ನು ಸಹಿಸುವ ಶಕ್ತಿ ಗಳಿಸಿದಂತೆ

ಜೀವನ ಮತ್ತಷ್ಟು ಬಲಗೊಳ್ಳುತ್ತದೆ. ಕಹಿಯ ಅನುಭವದಿಂದ ಸಿಹಿಗೆ ಮತ್ತಷ್ಟು ಕಳೆಬರುತ್ತದೆ. ಮನುಷ್ಯ ಸಮಾಜವೊಂದನ್ನೇ ಎಣಿಸಹೋದರೆ ಕಹಿಯ ಪ್ರಮಾಣ ಅಲ್ಲಿ ತುಂಬಿರುವಂತೆ ಕಾಣುವುದೇನೋ ಸಹಜ. ಅಲ್ಲಿ ಅತಿಯಾಗಿ ಸಿಹಿಯನ್ನುಂಡು, ಮತಿಯ ತೋಲವನ್ನು ಕೆಡಿಸಿಕೊಂಡವರೂ ಉಂಟು. ಕಹಿಯೇ ದಿನದ ಉಸಿರಾಗಿ ಬಂದು, 'ಬಾಳ್ವೆಗೆ ಅರ್ಥವಿಲ್ಲ' ಎಂದ ವರೂ ಉಂಟು. ಇತರ ಜೀವಿಗಳ ಸಂಸಾರದಲ್ಲಿ ಕಾಣದಷ್ಟು ಕಹಿ ಸಿಹಿಗಳ ವಿತರಣೆಯ ತಾರತಮ್ಯ, ಮನುಷ್ಯ ಸಮಾಜದಲ್ಲಿದೆ. ಈ ಸಮಾಜವು ಎಷ್ಟೆಷ್ಟು ನಾಗರಿಕವೆನಿಸಿಕೊಂಡಿದೆಯೋ, ಅಷ್ಟಷ್ಟು ಅಧಿಕ ಪ್ರಮಾಣದಲ್ಲಿ ಈ ಅವ್ಯವಸ್ಥೆ ಕಾಣಿಸುತ್ತಿದೆ. ಹೀಗೆ ನಮ್ಮ ಬದುಕು ಕೆಡಲು, ನಮ್ಮ ಹಿಂದಿಂದ ಬಂದಿರುವ ಸಂಪ್ರದಾಯಗಳು ಎಷ್ಟು ಕಾರಣವೆಂದು ನಾವು ಯೋಚಿಸುವ. ಯಾವ ಭಾವನೆಗಳಿಂದ ಹೀಗೆ ವಿತರಣೆ ಕೆಟ್ಟಿದೆ, ಅನಿವಾರ್ಯವಾದ ದುಃಖ ಗಳು ಮನುಷ್ಯನ ಪಾಲಿಗೆ ಬಂದು ಬಹುವಾಗಿ ಕಾಡುತ್ತಿವೆ-ಎಂಬುದನ್ನು ನಾವು ಪರಿಶೀಲಿಸಿ, ಇದಿರಿಸಬೇಕು. ಈ ಕೊರತೆಯ ಕಾರಣ—ಜೀವನ ಪ್ರವಾಹದೊಂದಿಗೆ ಸೇರಿಕೊಂಡ ತನ್ನನ್ನು ಸ್ವತಂತ್ರವಾದ ಆತ್ಮವನ್ನಾಗಿ ತಿಳಿದುದರಿಂದ—ಎಂದು ನನ್ನ ಊಹೆ. ಈ ವಿಚಾರವನ್ನು ಇನ್ನೊಮ್ಮೆ ಪರಿಶೀಲಿಸುವ.

**ಅಲ್ಲಗಳೆಯುವಿಕೆ**

ಜೀವನ ಕ್ಷಣಿಕ, ಮಾಯೆ, ಮಿಥ್ಯ-ಎನ್ನುವ ಎಲ್ಲ ವಾದಗಳು ಬದು ಕನ್ನು ಇದಿರಿಸುವ ಸಲುವಾಗಿ ಉಂಟಾದುದಲ್ಲ. ಅದರಲ್ಲಿನ ಘೋರಗಳಿಗೆ ಅಂಜಿ ಪ್ರಶ್ನೆಯನ್ನೇ, ಅಲ್ಲಗಳೆಯುವ ವಿಧಾನಗಳವು. ಬದುಕಿನ ಘೋರವೂ ಬೇಡ, ಸೊಗಸೂ ಬೇಡ ಎನ್ನುವುದರಿಂದ 'ಬದುಕು' ತಪ್ಪುತ್ತದೆಯೇ?

ಜೀವನವು ಕ್ಷಣಿಕ, ಚಿರವಲ್ಲ-ಎಂಬುದರಿಂದ ಪ್ರಪಂಚ ಮಾಯೆ—ಎನ್ನುತ್ತೇವೆ. ನಮ್ಮ ಜೀವನಕ್ಕೆ ಎದುರಾಗುವ ಎಲ್ಲ ವಸ್ತುಗಳೂ, ನಾವೂ ಸಹ ಚಿರವಲ್ಲವಾದರೆ, ಅದೊಂದೇ ಕಾರಣದಿಂದ ಬದುಕು ನಿರರ್ಥಕ, ಬೆಲೆ ಯಿಲ್ಲದ್ದು, ಅನುಭವಕ್ಕೆ ನಿರಾಕರಣೀಯ-ಎಂದು ತೀರ್ಮಾನವೇ? ಅದರಿಂದ ಬದುಕು ಮಾಯೆ ಇಲ್ಲವೆ ಮಿಥ್ಯವಾಗಬೇಕಿಲ್ಲ. ಈಗ ನೋಡಿದ ಒಂದು ರೂಪು ಇನ್ನೊಂದು ಗಳಿಗೆಗೆ ಮಾಯವಾಗುತ್ತದೆ. ಈಗ ಕೇಳಿದ ಒಂದು ಧ್ವನಿ, ಕೇಳಿಸಿದ ಮರುಕ್ಷಣದಲ್ಲೇ ಮಾಯವಾಗಬಹುದು. ಇದರಿಂದ

ಅವುಗಳು ಯಾವ ಅನುಭವವನ್ನೂ ಜೀವನಿಗೆ ಉಂಟುಮಾಡಲಾರವೇ? ಸೊಗಸನ್ನು ಕಲ್ಪಿಸಲಾರವೇ? ಅನೇಕ ಬದುಕೆಂಬುದು ಚಿರವಲ್ಲದ ಘಟನೆ ಗಳಿಂದ ಕೂಡಿಕೊಂಡದ್ದು. ಈ ವಿಶ್ವವೂ ಅಂತಹ ಅನೇಕ ಅಚಿರ ವಸ್ತುಗಳ ಮಾಲೆಯಾಗಿದೆ. ಆದರೆ ಒಂದೊಂದು ಅಚಿರ ವಸ್ತುವೂ, ಆಯಾ ಕಾಲಕ್ಕೆ ತಕ್ಕುದಾದ ಮಾನದಿಂದ ಉಪಯುಕ್ತವಾದ ಸತ್ಯವನ್ನು ಸಾರಬಲ್ಲುದು. ಅದರಿಂದ ಒಟ್ಟು ಸತ್ಯವೊಂದು ಸ್ಥಾಪಿತವಾಗಬಹುದು.

**ಚಿರ ಸತ್ಯ, ಭ್ರಮೆ**

ಎಲ್ಲ ಕಾಲಕ್ಕೂ ಅನ್ವಯಿಸುವ ಎಲ್ಲವನ್ನೂ ತಿಳಿಸುವಂಥ "ಸತ್ಯ" ವೆಂಬುದು ಕೇವಲ ಒಂದು ಪ್ರಮೇಯ. ಮಿತಕಾಲ ಬದುಕುವ ಜೀವಿಗಳ ಹತೋಟಿಗೂ, ಅನುಭವಕ್ಕೂ ಅದು ಸಿಲುಕಲಾರದ ಎಂದು ವಸ್ತು. ವಿಶ್ವದ ಗತಿ ನಿಂತ ಮೇಲೆ, ಅದರ ನಿಲುಕಿಗೆ ಅದು ಸಿಗಬಹುದೋ ಏನೋ! ನಮಗಲ್ಲ, ನಿಮಗಲ್ಲ.

ಅಚಿರವಾದ ಅನೇಕ ಬಾಳ್ವೆಗಳು ಇಂದಿನ ತನಕ ಹೇಗೆ ವಿಕಾಸ ಗೊಂಡುವು ಎಂಬುದನ್ನು ಪರಿಶೀಲಿಸಬಾರದೆ? ಪ್ರಾಚೀನ ಯುಗದ ಮೀನು, ಹಾವಾಗಿ, ಹಕ್ಕಿಯಾಗಿ ಇಂದಿನ ರೂಪಕ್ಕೆ ಕಾರಣವಾಯಿತು. ಇನ್ನೊಂದು ಜೀವ ಅದರಂತೆ ಕಾಲಾಂತರದ ವಿಕಾಸದಿಂದ ಇಂದಿನ ಮನುಷ್ಯ ಸಂತಾನಕ್ಕೆ ಕಾರಣವಾಯಿತು. ಇದೂ ಚಿರವಲ್ಲ; ನಾಳೆ ತಿರುಗಿ ಇನ್ನಾವುದೋ ವಿಕಸಿತ ಜೀವನಕ್ಕೆ ಇವು ಸಾಗುತ್ತಿವೆ. ಒಂದೊಂದು ಜೀವದ ಹತ್ತುನೂರು ದಿನಗಳ ಬಾಳ್ವೆಯು, ಚಿರವೆಂಬಷ್ಟು ದೀರ್ಘವಾದ, ಮನುಷ್ಯ ಕುಟುಂಬದ ಒಟ್ಟು ಬಾಳ್ವೆಗೆ ಕಾರಣವಾಗಿದೆ.

**ಕ್ಷಣಿಕವಾದರೂ ಸತ್ಯ**

ಅನೇಕ ಪಶು ಸ್ವಭಾವ, ಶೀಲ, ಪ್ರತಿಫಲನೆ (Reflex) ಗಳು ಯುಗ ಯುಗಳ ವಿಕಾಸದಿಂದ ಇಂದಿನ ಮನಷ್ಯನ ಯೋಚನಾಶಕ್ತಿಗೂ, ಸ್ವಭಾವಕ್ಕೂ, ಸಂಸ್ಕೃತಿಗೂ, ನಂಬಿಕೆ, ಮತ, ಧರ್ಮಗಳಿಗೂ ಕಾರಣ ವಾಗಿರಲು, ಇವುಗಳ ಹಿನ್ನೆಲೆಯಲ್ಲಿರುವ ಒಂದೊಂದು ಜೀವಿಯ ಮನಸ್ಸು ಕ್ರಿಯೆಗಳು—ವ್ಯರ್ಥವೆನ್ನುವುದು ಏತರ ಮಾತು? ಅಚಿರವಾದುದು ಅಸತ್ಯ— ಎಂಬ ವಾದ ಶಬ್ದ ಚಮತ್ಕಾರ? ಏಕೆಂದರೆ—ಎಂದಿನ ತನಕ 'ಸತ್ಯ' ವೆಂಬುದು ಚಿರತತ್ವದ ದೃಷ್ಟಿಯಿಂದ ನಮಗೆ ತಿಳಿದಿಲ್ಲವೋ, ಅಚಿರ ವಸ್ತುಗಳ

ಒಡನಾಟವೇ ನಮಗೆ ಗತಿಯೋ—ಅಲ್ಲಿಯ ತನಕವೂ ಅದು ಬರಿಯ 'ಶಬ್ದ'. ಅದು ನಮ್ಮಲ್ಲಿ ಯಾವೊಂದು ಕಲ್ಪನೆಯನ್ನೂ ಕೆರಳಿಸಲಾರದ ಶಬ್ದ.

**ಚೈತನ್ಯ—ಅಚಿರತ್ವ**

ಇನ್ನೊಮ್ಮೆ ಯೋಚಿಸುವ—ಯಾವುದನ್ನು ನಾವು ಮೆಚ್ಚಬೇಕು? ಚಿರವಾದ, ಸ್ಥಿರವಾದ ಒಡವೆಯನ್ನೇ? ಯಾವುದು ಹಾಗಿದೆ? ನಮಗೆ ತಿಳಿಯದ ಯಾವುದೋ ಒಂದು ಹಾಗಿದೆಯೆಂದು-ಊಹೆ. ಇರಲಿ. ನಮಗೆ ತಿಳಿದ ಮಟ್ಟಿಗೆ ನಾವು ಅಳೆಯಲು ಶಕ್ತರು. ಹಾಗೆ ಅಳೆದರೆ-ಅಲುಗಾಡದ, ಬದಲಾಗದ, ವಸ್ತುಗಳು ಬೆಳವಣಿಗೆಯ ಸೂಚನೆಯೆನಿಸವು; ಚೈತನ್ಯದ ಗುರುತೆನಿಸವು. ಅವು ಜಡತೆಯ ಲಕ್ಷಣ. ಜೀವನದ ಸ್ವಭಾವ ಅದರಿಂದ ಬೇರೆಯಾದದ್ದು. ಜೀವನದಲ್ಲಿ ಚೈತನ್ಯ ಕೆಲಸ ಮಾಡುತ್ತಿರುವುದರಿಂದಲೇ ಚಲನೆ, ಏಳು, ಬೀಳುಗಳಿವೆ. ಕಾಲದ ದೃಷ್ಟಿಯಿಂದ ಇವು ಅಚಿರ. ಚೈತನ್ಯಮಯವಾಗಿರುವ ಜೀವಿಯು ಬೆಳೆಯಬೇಕು. ಬೆಳವಣಿಗೆಯ ದಾರಿಯಲ್ಲಿ ಇದಿರಾಗುವ ಅನುಭವಗಳಿಂದ ವಿಸ್ತರಿಸಬೇಕು. ಇದಿರಾಗುವ ಆವರಣಕ್ಕೆ ಸಮನಾಗಿ ಬದಲಿಸಬೇಕು. ಕಂಡ ನೋಟವನ್ನೇ ಕಾಣುತ್ತ, ಕಂಡ ಬಳಗದಲ್ಲಿಯೇ ಬೆರೆಯುತ್ತ, ಪಡೆದ ಅನುಭವಗಳನ್ನೇ ಪಡೆಯುತ್ತಿರುವ ಜೀವಿಗೆ ಚೇತನದ ಉಪಯೋಗವೇನು? ಅದರಿಂದ ಬಾಳು ಬೆಳೆದೀತೆ?

**ಮಿತವಾದ ಹೊಣೆ ನಮ್ಮದು**

ಪ್ರಪಂಚವು ನಮಗೆ ತಿಳಿದ ಮಟ್ಟಿಗೆ-ಚೈತನ್ಯಮಯವಾಗಿಯೇ ಹರಿಯುತ್ತಿದೆ. ನಮ್ಮ ಜೀವನದ ಅಳತೆಯಲ್ಲಿ, ಕದಲದೆ ನಿಂತಿರುವ ಬೆಟ್ಟಗಳೂ ಸಹ ಯುಗಮಾನದ ದೃಷ್ಟಿಯಿಂದ ಚಲನೆಯ ಪರಿಣಾಮಗಳಾಗಿವೆ. ಪ್ರಪಂಚದ ಪಯಣದ ಉದ್ದೇಶ ನಮಗೆ ತಿಳಿಯದೆ ಹೋಗಬಹುದು. ಕಾಳಗದ ಸೇನಾನಿಯ ಮನಸ್ಸನ್ನು ಪ್ರತಿಯೊಬ್ಬ ಪದಾತಿಯೂ ಅಳೆಯಲಾರ. ನಮ್ಮ ಕೆಲಸವೆಂದರೆ-ನಮ್ಮ ಆವರಣ, ಶಕ್ತಿ, ಮಿತಿಗಳಿಗೆ ಸಮನಾಗಿ ನಮ್ಮ ಸ್ಥಾನವನ್ನೂ, ಕರ್ತವ್ಯವನ್ನೂ ತಿಳಿಯುವುದು. ಅಷ್ಟಕ್ಕೆ ನಮ್ಮ ಹೊಣೆ ಮುಗಿಯಿತು. ಪ್ರಪಂಚದ ಕೊನೆಯೇನೆಂಬುದಕ್ಕೆ ಹೊಣೆಯಾಗುವ ಹಿರಿತನವನ್ನು ವಹಿಸಬೇಕಿಲ್ಲ. ನಮ್ಮ ಪಾಲಿನ ಪ್ರಪಂಚದಲ್ಲಿ ಬಾಳಿ, ಅದು ಕೊಡುವ ಅನುಭವಗಳಿಂದ ನಾವು ಅರಳುವುದಾದರೆ, ನಮ್ಮ ಕೆಲಸ ಮುಗಿಯಿತೆಂದು ತಿಳಿಯುವ.

**ತೀರ ನಂಟು ಬೇಕಿಲ್ಲ.**

ಇದೆಲ್ಲವನ್ನೂ ಬಿಟ್ಟು—ಬಾಳು ಬರಿಯ ಮಾಯೆಯೆಂದರೆ-ಹೆತ್ತವರ ಪಾಲಿಗೆ ನಾವೊಂದು ಹೊರೆಯೆಂದು ಅರ್ಥ. (ಆಗ ಹುಟ್ಟೂ ಮಾಯೆ, ಬದುಕೂ ಮಾಯೆ, ಸಾವೂ ಮಾಯೆ—ಎನ್ನುವವರುಂಟು. ಹಾಗಿದ್ದರೆ ಯಾರು ಏನನ್ನೂ ಚಿಂತಿಸಬೇಕಿಲ್ಲ. ಮಾಯಾ ರಾಜ್ಯದ ನಾವುಗಳು ಮಾಯೆ ಮೀರಿದ ತತ್ವವನ್ನು ರಚಿಸೆವು.) ಮನುಷ್ಯ ಜೀವಿ ಬಾಳಿನಲ್ಲಿ ವಿಹರಿಸುವಾಗ—ಇವೆಲ್ಲವೂ ಶಾಶ್ವತವೆಂದು ತಿಳಿದಲ್ಲಿ, ಅವನ ಆಸೆಗಳು ಹೆಚ್ಚುತ್ತವೆ. ಆಸಕ್ತಿಗಳು ಅಳತೆ ಮೀರುತ್ತವೆ. ಒಟ್ಟಿಂದ ಅವನ ಸ್ವಾರ್ಥವು ಮಿತಿಮೀರಿ-ಅವನು ದುಃಖಕ್ಕೆ ಗುರಿಯಾಗುತ್ತಾನೆ. ಅವನ ಸುತ್ತಲಿನ ಜನಕ್ಕೆ ಅವನು ದುಃಖಕಾರಣನಾಗಬಹುದು-ಎಂದು ಹಾಗೆಂದಿರಬೇಕು. ಒಂದು ಪುಟ್ಟ-ಉದಾಹರಣೆ: ಮನುಷ್ಯ ಬದುಕುವ ಮಿತಿ-೧೦೦ ವರ್ಷವೆಂದು ತಿಳಿಯುವ. ಆದರೆ ಅವನು ಸಂಪತ್ತು ಕೂಡಿಹಾಕುವ ಬಗೆಯನ್ನು ಕಂಡರೆ, ಆ ಗಳಿಮೆಯು ಮುಂದಿನ ಮೂರು ಶತಮಾನಗಳಿಗೂ ಬರಬೇಕೆಂದು ಬಯಸುವಂತೆ ಕಾಣುತ್ತದೆ. ಇದರಿಂದ ಅವನ ಸಂತಾನ, ನ್ಯಾಯವಾಗಿ ದುಡಿಯಬೇಕಾದಷ್ಟು ಶ್ರಮಿಸುವುದಿಲ್ಲ. ನಮ್ಮ ಅತಿ ಗಳಿಕೆಯಿಂದ ನಮ್ಮ ಆಚೀಚಿನ ಅನೇಕರ ಸುಖಗಳು ನಾಶವಾಗಬಹುದು. ಅಲ್ಲದೆ ಬಾಳ್ವೆಗೆ ಬಲವಾಗಿ ಅಂಟಿದಾತನೂ, ಅದರ ಮಿತಿಯನ್ನು ಮನಗಾಣದಾತನೂ ಸಾವಿನ ಭೀತಿಗೆ ಗುರಿಯಾಗಬೇಕಾಗುತ್ತದೆ. ಈ ದೃಷ್ಟಿಯಿಂದ–ಬಾಳ್ವೆಯು ಮಾಯೆ, ಅಚಿರ—ಎಂದು ಬೋಧಿಸಬಹುದು.

ಬದಲು ಪ್ರಪಂಚವೇ ಮಾಯೆಯೆಂದಾಗಿ, ಬದುಕೆಲ್ಲ ಭ್ರಮೆಯಾದರೆ, ಮಾಯಾವಾದ ಸ್ಥಾಪಿಸಲು ಹೋದ ಶಂಕರಾಚಾರ್ಯರ ಪ್ರಯತ್ನ ಯಾರ ಸಲುವಾಗಿ? ಪಾಂಡಿತ್ಯವೂ ಮಾಯೆ, ಮಡದಿಯೂ ಮಾಯೆಯೆಂಬಂತೆಯೆ, ಶಿಷ್ಯರೂ ಮಾಯೆ, ಮಠ, ಗುಡಿಗಳೂ ಮಾಯೆಯಲ್ಲವೇ? ಆಗ, ಬೇಕಾದುದನ್ನು ಬಿಟ್ಟು ಉಳಿದುವು ಮಾಯೆಯೆಂದರ್ಥವೇ? ಬದುಕು, ಇಂಥ ಮಾಯಾವಾದವನ್ನು ಕೇಳಿ ಲಾಭಹೊಂದಬಹುದಾದಷ್ಟರ ಸತ್ಯವಾಗಿದ್ದರೆ, ಆಗ ಪ್ರಪಂಚದ ನಮ್ಮ ಜೀವನವೂ, ಅನುಭವಗಳಿಂದ ಲಾಭ ಪಡೆಯಬಹುದಾದಷ್ಟು ಸತ್ಯ—ಎನ್ನಬಹುದು.

**ಅತಿ ಲೌಕಿಕರಿಗೆ**

ಶಂಕರಾಚಾರ್ಯರು-ಕೇವಲ ಸ್ವಾರ್ಥಮಯ ಬದುಕಿಗೋ, ಅತ್ಯಾಸಕ್ತ ಬದುಕಿಗೋ ಬಲಿಯಾದ ಜನಗಳನ್ನು ಎಚ್ಚರಿಸಲು, ಬದುಕಿನ ಅನೇಕ ಕಠಿಣ ಸತ್ಯಗಳನ್ನು ಹೇಳಿದರು. ಯಾವ ಮನೋಧರ್ಮದಿಂದ ಹೇಳಿದರು? ಯಾವ ಮನೋಧರ್ಮದ ಜನರಿಗೆ ಹೇಳಿದರು-ಎಂಬುದೂ ಅವರ ಮಾತಿನ ಅರ್ಥಗ್ರಹಣಕ್ಕೆ ಅವಶ್ಯ.

**ಜಲಕಣ, ಪ್ರವಾಹ**

ಜೀವನದಲ್ಲಿ ವ್ಯವಹರಿಸುತ್ತಿರುವ ವ್ಯಕ್ತಿಗಳು—ಚಿರ, ಅಚಿರ ವಸ್ತುಗಳೆಂದು ಹೇಗೆ ತೀರ್ಮಾನಿಸಬೇಕು? ತಾನು ಜೀವನ ಪ್ರವಾಹದ ಒಂದು ಅಂಶ, ತನಗೂ ಒಟ್ಟು ಜೀವನಕ್ಕೂ ಸಂಬಂಧವಿದೆ, ತಾನು ಮಿತಕಾಲ ಬಾಳುವವನು; ಒಟ್ಟು ಜೀವನವೆಂಬುದು ಅನಂತವಾದ ಪ್ರವಾಹ. ಇವುಗಳ ಪರಸ್ಪರ ಹೋಲುವೆಗಳು ಚಿರ-ಅಚಿರವೆಂಬ ಮಾತಿಗೆ ಅರ್ಥ ಪುಷ್ಟಿಯನ್ನು ಕೊಡಬಹುದು. ಇಲ್ಲಿನ 'ಅಚಿರ'ವೂ ಸಾಪೇಕ್ಷವಾದುದು. ನಮ್ಮ ಮಾನದಿಂದ ಅದು ಅಚಿರ. ದೀರ್ಘವಾಗಿ, ಬಹುಕಾಲ ಹರಿಯುವ ನದಿಯೊಂದರಲ್ಲಿ, ನಾವು ಈ ಗಳಿಗೆಯಲ್ಲಿ ಯಾವುದಾದರೊಂದು ಜಲಕಣವನ್ನೋ ಜಲಭಾಗವನ್ನೋ ಗುರುತಿಸಲಾರೆವೇ? ಈ ಕ್ಷಣಕ್ಕೆ ಗುರುತಿಸಬಲ್ಲೆವು. ಮರುಕ್ಷಣ ಅದರ ಸ್ಥಾನದಲ್ಲಿರುವುದು ಬೇರೆಯೇ ನೀರು. ಮೊದಲ ನೀರು ಅಲ್ಲಿಂದ ಮಾಯವಾಯಿತು. ಆದರೆ ಅದು ನಾಶವಾಯಿತೇ? ನಿರರ್ಥಕವಾಯಿತೇ? ಈ ಪ್ರವಾಹದ ಒಂದೊಂದು ಜಲಭಾಗವನ್ನು ಒಂಟಿಯಾಗಿ ನೋಡುವಾಗ ಅದು ಅಚಿರವಾಗಿ ಕಾಣಿಸೀತು. ಜಲಕಣಗಳ ಚಟುವಟಿಕೆಗಳು ಕ್ಷಣಿಕವೆನಿಸಿಕೊಂಡರೂ, ನದಿಯ ಪ್ರವಾಹ ಮಾತ್ರ ಚಿರಂತನವಾಗಿ ಕಾಣುವುದಿಲ್ಲವೆ? ಪ್ರವಾಹಕ್ಕೆ ಬೆಲೆಯಿರುವುದಾದರೆ, ಅದರೊಳಗಣ ಪ್ರತಿ ಜಲಕಣಕ್ಕೂ, ಅದರ ಓಡಾಟಕ್ಕೂ ಬೆಲೆಯಿರಬೇಡವೇ?

ಮನುಷ್ಯ, ಪ್ರಪಂಚದಲ್ಲಿ ಮಾಡುವ ಅನೇಕ ವಿಮರ್ಶೆಗಳು, ತನ್ನನ್ನು ಬೇರೆಯಾಗಿ ಇರಿಸಿಕೊಂಡು ಮಾಡುವುದರಿಂದಾಗುತ್ತದೆ. ಆಗ ಮಾನವನು ತನಗೆ ಅನುಕೂಲ, ಪ್ರತಿಕೂಲಗಳೆಂದು ಈ ಪ್ರಪಂಚವನ್ನೂ ಅದರೊಳಗಣ ಬದುಕನ್ನೂ ವಿಂಗಡಿಸುತ್ತಾನೆ. ಇದರ ಮೇಲಿಂದ ತೀರ್ಮಾನಿಸುತ್ತಾನೆ. ಈ ಬಗೆಯ ದೃಷ್ಟಿಯಿಂದ ಅವನು ಬದುಕನ್ನು ಅಳೆಯಲಾರ; ಅದರಿಂದ

ಅವನ ಬದುಕಿಗೆ ಬೆಳಕೂ ದೊರೆಯಲಾರದು. ಈ ಬಗೆಯ ಅಳತೆ, ಅವನ ಐಹಿಕವಾದವನ್ನು ಹೊಂದಿದ್ದರೂ ಸರಿ, ಪಾರಮಾರ್ಥವನ್ನು ಹೊಂದಿದ್ದರೂ ಸರಿಯೆ–ಅವು ತಪ್ಪು ಹಾದಿಗಳು. ತನ್ನ ಆತ್ಮವನ್ನು ಜೀವನ ಪ್ರವಾಹದಿಂದ ಬೇರ್ಪಡಿಸಿ, ಅದರ ಸುಖ ದುಃಖ, ಬಿಡುಗಡೆಗಳನ್ನು ಬೇರ್ಪಡಿಸಿ ನೋಡುವ ನೋಟವು ಪಾರಮಾರ್ಥವಲ್ಲ. ನಮ್ಮ ಕಡು ಸ್ವಾರ್ಥಕ್ಕೆ ನಾವು ಕೊಡ ಬಹುದಾದ ಒಂದು ಭವ್ಯ ಹೆಸರಷ್ಟೆ.

**ತನಗಾಗಿಯೇ ಅಲ್ಲ**

ಪ್ರಪಂಚ ತನಗಾಗಿಯೇ ಹುಟ್ಟಿದೆ. ತನಗೆ ಅದು ಅರ್ಥವಾಗುವಂತಿರ ಬೇಕು. ಹಾಗಿಲ್ಲದೆ ಹೋದರೆ ಅದು ಬೆಲೆಯಿಲ್ಲದ ವಸ್ತು–ಎಂಬ ನೋಟ ಸಂಕುಚಿತ ನೋಟ. ತನ್ನ ಆಸೆಯ ಹಿಡಿತಕ್ಕೆ ಬಾರದಿರುವುದರಿಂದ ಬದುಕು "ಮಾಯೆ" ಎನಿಸಬೇಕಿಲ್ಲ. ಸಾವೆಂಬುದಿದೆ; ತನಗೆ ಸಾವು ಅಪ್ರಿಯ ಎಂಬು ದರಿಂದ ಜೀವನ ನಿಸ್ಸಾರವಲ್ಲ. ಈ ಭೀತಿಯ ತೀರ್ಮಾನಗಳು, ಅಂಥ ಯಾವುದೇ ನಿರ್ಣಯಗಳು ಬದುಕಿನ ಅರ್ಥವನ್ನು ನಮಗೆ ಕೊಡಲಾರವು. ಪ್ರಪಂಚ ತನಗಾಗಿ ಇದೆ ಎನ್ನುವ ಸ್ವಾರ್ಥಕ್ಕೂ, ಅದು ತನ್ನ ವೈರಿ ಎಂದು ತಿಳಿಯುವ ಪಾರಮಾರ್ಥಕ್ಕೂ ಗುಣದಲ್ಲಿ ವ್ಯತ್ಯಾಸವಿಲ್ಲ. ಒಂದೇ ಮನೋ ಧರ್ಮದ ಎರಡು ಪಾರ್ಶ್ವಗಳವು. ಇದು ಹೆಗ್ಗರಿಮೆಯ (Superiority complex) ಪ್ರಭಾವ. ನಮ್ಮ ಶರೀರದ ಯಾವುದೇ ಒಂದು ಅವಯವ, ಈ ಶರೀರದ ಉಳಿದೆಲ್ಲ ಅಂಗಗಳು ತನ್ನ ಸಲುವಾಗಿ ಬದುಕಿವೆ ಎಂದು ಹೇಳಿದರೆ ಹೇಗೆ? ಅದರಂತೆ ಈ ಲೋಕದಲ್ಲಿ ನನಗೇನು ಬೆಲೆ, ನಾನೆಷ್ಟು ವ್ಯರ್ಥ— ಎಂದರೂ ಹಾಗೆ. ವ್ಯಕ್ತಿಯು ತನ್ನನ್ನು ಜೀವನ ಪ್ರವಾಹದಿಂದ ಕಿತ್ತು ತೆಗೆದು, ಎಣಿಸುವ ಲಾಭಹಾನಿಗಳ ವಿಮರ್ಶೆ ಸಮನಾದುದಲ್ಲ. ಹಾಗೆ ಮಾಡದೆ, ತಾನು ಜೀವನ ಪ್ರವಾಹದೊಡನೆ ಸೇರಿದವನು ಎಂಬ ಅರಿವನ್ನು ತಂದು ಕೊಂಡಲ್ಲಿ, ಜೀವನವೆಂಬುದು ಸಾರ್ಥಕವೆನಿಸುತ್ತದೆ. ನಾವು ಹುಟ್ಟಿರುವೆವು ಎಂಬುದೇ ಬದುಕು—ತಕ್ಕುದು, ಸಲ್ಲುವುದು—ಎನ್ನಲು ಕಾರಣಗಳಾಗು ತ್ತವೆ. ಮಾನವನ ಬದುಕು ಒಂದು ಹೊರೆಯಾದಲ್ಲಿ, ಅದು ನಿಸರ್ಗದಲ್ಲಿ ಉಳಿಯುತ್ತಿರಲಿಲ್ಲ. ಪ್ರಕೃತಿಯು ತನ್ನ ವಿಕಾಸಮಾರ್ಗದಲ್ಲಿ, ಯಾವಾಗಲೂ ಬೇಡವಾದುದನ್ನು ತೊಡೆದುಹಾಕುವಂಥ ರೀತಿ ಕಾಣಿಸುತ್ತಿದೆ. ಕಪಿ ಯಿಂದ ವಿಕಸನಗೊಂಡ ಮಾನವ ತನಗೆ ಬೇಡವಾದ ಬಾಲವನ್ನು ತೊಡೆ

ದಂತೆ, ಹಲ್ಲಿಯ ಕಾಲು ಹಾವಿನಲ್ಲಿ ಕುಂಠಿತವಾದಂತೆ, ವಿಶ್ವಹಿತಕ್ಕೆ ಮನುಷ್ಯ ಬೇಡವಾದರೆ, ಅವನೂ ಕ್ರಮೇಣ ಮಾಯವಾಗುತ್ತಾನೆ. ಜೀವನ ಕೋಟಿಯೇ ಬೇಕಿಲ್ಲದೆ ಹೋದರೆ, ಅದನ್ನೂ ತೊಡೆದುಹಾಕುವ ಶಕ್ತಿ ನಿಸರ್ಗಕ್ಕಿದೆ. "ಮಾನವೀ ಜನ್ಮ ವ್ಯರ್ಥ"ವೆಂದು ನಾವು ಅಳಬೇಕಾಗಿಲ್ಲ.

## ಜಗದೊಡನೆ ಬೆರೆಯಬೇಕು

ಇತ್ತ ಬದುಕನ್ನು ಅಲ್ಲಗಳೆಯುವುದು, ಅತ್ತ ಬದುಕಿನ ಕಾಲವೆಲ್ಲ ದೇವರ ಹೊಗಳಿಕೆಗೇ—ಎಂದು ತಿಳಿಯುವದು ಒಳ್ಳೆಯ ಆಸ್ತಿಕ ಭಾವನೆ ಗಳೆನಿಸಲಾರವು. ಹಲವು ಧರ್ಮಗಳಲ್ಲಿ ಈ ಬಗೆಯ ಪಲ್ಲವಿಯನ್ನು ಕೇಳುತ್ತಿದ್ದೇವೆ. ಸೃಷ್ಟಿಕರ್ತನೊಬ್ಬನಿರುನೆಂದೇ ತಿಳಿಯುವ. ಅವನಿರುವು ದಾದರೆ, ಉಳಿದ ಜೀವಿಗಳ ಜತೆಯಲ್ಲಿ ಹುಟ್ಟಿದ ನಾವು, ಕೇವಲ ಅವನನ್ನೇ ಪ್ರೀತಿಸಬೇಕೆಂದು ಬಯಸುವನೇ? ಉಳಿದೆಲ್ಲ ಜಗತ್ತು 'ಹೇಸಿಕೆ'ಯೆಂದು ಜಿಗುಪ್ಸೆಪಟ್ಟರೆ, ಯಾರ ಕೃತಿಗಾಗಿ ಜಿಗುಪ್ಸೆಗೊಂಡಂತಾಯಿತು? ಹತ್ತೆಂಟು ಮಕ್ಕಳನ್ನು ಪಡೆದ ತಾಯಿಯೋ, ತಂದೆಯೋ-ತನ್ನ ಒಂದು ಕೂಸು, ಉಳಿದ ಮಕ್ಕಳೊಡನೆ ಸೇರಿ ಆಟವಾಡುವುದನ್ನು ಕಂಡು ಕುಪಿತರಾದಾರೇ? ದೇವರು ಅಸೂಯಾಪರನೇ? ಸ್ವಾರ್ಥಿಯೇ? ಹೊಗಳ್ತೆಬಾಕನೇ? ಮಗು ತನ್ನ ಅಣ್ಣ ತಮ್ಮಂದಿರೊಡನೆ ಬೆರೆಯದೆ, ಒಡನಾಡಿಗಳ ಜತೆಸೇರದೆ ಹೊಸ್ತಿಲಮೇಲೆ ಕುಳಿತು "ಅಮ್ಮ, ಅಮ್ಮ" ಎಂದು ಅತ್ತುದಾದರೆ, ತಾಯಿಗೆ ಹಿತವೆನಿಸೀತೆ? ಈ ಮಗುವಿಗೆ ಏನೋ ಕಾಯಿಲೆಯೆಂದು ಆಕೆ ತಿಳಿದಾಳು. ಅತಿಯಾಗಿ ತಾಯಿಯನ್ನೇ ಹಂಬಲಿಸುವ ಮಗುವನ್ನು ಕಂಡು ಸಾಮಾನ್ಯ ತಾಯಂದಿರು "ಇದಕ್ಕೇನು ಸಂಕಟ! ತಣ್ಣಗೆ ಅಣ್ಣತಮ್ಮಂದಿರೊಡನೆ ಆಟವಾಡಬಾರದೆ" ಎನ್ನಬಹುದು. ತನ್ನ ಮಕ್ಕಳೆಲ್ಲರು ಗಳಿಗೆಗೆ ಗಳಿಗೂ ತನ್ನತ್ತ ಮೋರೆಮಾಡಿ ಕೂಗುತ್ತಿರಲಿ-ಎಂಬ ಸಹ ದೇವರು ಆರೋಗ್ಯವಂತ ದೇವನೆನಿಸಲಾರ. ದೇವರನ್ನು ಕಲ್ಪಿಸುವಾತ—ಇನ್ನೂ ಉದಾರವಾದ, ವಿಶಾಲನಾದ ದೇವರನ್ನು ಕಲ್ಪಿಸಬೇಕು. ಹುಟ್ಟಿದ ಕೂಸು ತನ್ನ ಒಡನಾಡಿಗಳೊಡನೆ ಬೆರೆತು ನಲಿಯು ವುದರಿಂದ ತಾಯಿತಂದೆಯರು ಸಂತೋಷಪಡುವಂತೆ, ಹುಟ್ಟಿದ ವ್ಯಕ್ತಿ ಬಾಳಿ ನಲ್ಲಿ ಬೆರೆತು ಜೀವನದ ಆಟವನ್ನು ರಸವತ್ತಾಗಿ ಆಡುವುದಕ್ಕಿಂತ ಹೆಚ್ಚಿನ ಬಯಕೆ ದೇವರಿಗಿರಲಾರದು.

## ಪ್ರೀತಿ—ಭೀತಿ

ವಿಶ್ವದ ವ್ಯಾಪಾರವನ್ನು ತಿಳಿಯುವುದು ತೀರ ದೊಡ್ಡ ಕೆಲಸ. ಚೆನ್ನಾಗಿ ಬದುಕಿ, ತನ್ನ ಜೀವನದ ಸುತ್ತಲೂ ಬರುವ ಇತರ ಜೀವನಗಳನ್ನು ಚೆನ್ನಾಗಿ ತಿಳಿದು, ಅವುಗಳೊಡನೆ ಹಿತವಾಗಿ ತನ್ನ ವ್ಯವಹಾರವನ್ನಿರಿಸಿಕೊಳ್ಳುವುದು ಕಡಮೆಯ ಕೆಲಸವೇನು? ಜೀವನ ರಾಜ್ಯದ ಅನೇಕ ಸೊಗಸುಗಳನ್ನು ಕಂಡು ಮೈಮರೆತು ಆನಂದಿಸುವುದು ಕಡಿಮೆಯೇನು?

ಮನುಷ್ಯನಿಗೆ ಸ್ವಾಭಾವಿಕವಾಗಿ ಈ ಭಾವನೆ ಬಾರದಿರಲು ಕಾರಣ ವೆಂದರೆ—ಮೂಲ ಮನುಷ್ಯನ ಬಳಗದವರು ದೇವರನ್ನು ಕಲ್ಪಿಸುವಾಗಲೇ ಅಂಥ ಭಾವನೆಯಿಂದ ಕಲ್ಪಿಸದಿದ್ದುದು. ಮಾನವ ಸಂಸ್ಕೃತಿಯ ಪ್ರಥಮ ದೇವರು-ಭೀತಿಜನ್ಯನು. ಅವನಿಗೆ ಹೆದರಿಕೊಂಡೇ ಮನುಷ್ಯ ತನ್ನ ನಂಬುಗೆ ಯನ್ನು ರೂಪಿಸಿದ. ಕ್ರಮೇಣ, ಕೆಲವು ಸ್ವತಂತ್ರರು ಅವನಿಗೆ ಕ್ರೂರ ಬಿರುದು ಸಲ್ಲಿಸುವ ಬದಲು, ವಾತ್ಸಲ್ಯ ಗುಣವನ್ನು ಆರೋಪಿಸಿದರು. ದೇವರು ದಯಾಮಯನಾದನು, ಕರುಣಾಮಯನಾದನು. ಅವನನ್ನು ಕುರಿತು ನಾವು ಮಾಡುತ್ತಿರುವ ಸ್ತುತಿ ಸ್ತೋತ್ರಗಳೆಲ್ಲ ಈ ಮನೋಧರ್ಮದ ಛಾಯೆಗಳು. ಭೀತಿ ಮನಸ್ಕನು—ದೇವರ ರೌದ್ರವನ್ನು ಚಿತ್ರಿಸಿ, ಅವನಿಗೆ ಮಣಿದನು. ತಿರುಗಿ ತನಗಾಗಿ 'ಅದನ್ನು ಕೊಡು, ಇದನ್ನು ಕೊಡು' ಎಂದೂ ಬೇಡಿದನು. ಇದೇ ಮನೋಭಾವವೇ ಮುಂದುವರಿದು ಪ್ರೀತಿಮನಸ್ಕನ ಭಕ್ತಿ ಬೆಳೆಯಿತು. ಅವನೂ ಹೊಗಳುವ ವಿದ್ಯೆಯನ್ನು ಕಲಿತನು. ಈ ಸ್ತುತಿಸುವಿಕೆಯ ಹಿಂಗಡೆ ಯಲ್ಲಿ ಭೀತಿ ಇನ್ನೂ ಉಳಿದಿದೆ. ಇಂಥ ಪ್ರೀತಿಯೂ ಸಮನಾದ ದಾರಿ ಯೆಂದು ಹೇಳಬರುವುದಿಲ್ಲ. ನಿಸರ್ಗವನ್ನು ನೋಡುವಾಗ ಭೀತಿ, ಪ್ರೀತಿಗಳು -ಒಂದು ಜೀವನದ ಇಮ್ಮೈಗಳಾಗಿ ಕಾಣಿಸದೇನು? ಹಸುವನ್ನು ಕೊಂದು ತನ್ನ ಮರಿಗಳನ್ನು ಪೋಷಿಸುವ ತಾಯಿ ಹುಲಿಯ ಪ್ರೀತಿ ಕಡಿಮೆಯೇ?

ಬದುಕಿನ ಬೆಲೆಯನ್ನು ವಿಮರ್ಶಿಸುವ ಬುದ್ಧಿಯು—ಪ್ರೀತಿ, ಭೀತಿ ಗಳೆರಡರ ಯೋಗ್ಯ ತೂಕವನ್ನು ಮಾಡಲು ಕಲಿಯಬೇಕಾದೀತು. ಆಗ ಜೀವನದ ಸುಖದುಃಖಗಳನ್ನರಿಯುವ ಶಕ್ತಿ ನಮಗೆ ಬಂದೀತು.



## ೫. ನಮ್ಮ ನೋಟದ ಮುಖ್ಯ ಕೊರತೆಗಳು

**ತಾನು ಬೇರೆಯಲ್ಲ**

ಮನುಷ್ಯನು ಪ್ರಪಂಚವನ್ನು ಕುರಿತಾಗಿ ಮಾಡುವ ವಿಮರ್ಶೆಗೆ ತೀರ ಬಾಧಕವಾಗಿ ಬಂದಿರುವುದು ಅವನು 'ತನ್ನನ್ನು' ಬೇರೆಯೇ ಒಂದು ಜೀವಿಯನ್ನಾಗಿ ತಿಳಿಯುವುದರಿಂದ. ಇತರ ಜೀವಿಗಳಿಂದ ಅವನಿಗೆ ದೊರೆಯಬಹುದಾದಷ್ಟು ಸುಖ ಸಿಗದಿರುವುದಕ್ಕೆ, ಅವುಗಳೊಡನೆ ಇವನ ವ್ಯವಹಾರ ಕೆಡುವುದಕ್ಕೆ, ಅವನ ಈ ಬೇರೆತನದ ಭಾವನೆ ಕಾರಣವಾಗಿದೆ. ತನ್ನ ಉಸಿರು, ಕ್ರಿಯೆ, ಮನಸ್ಸುಗಳೆಲ್ಲ ಸುತ್ತಲಿನ ಪ್ರಪಂಚದೊಡನೆ ಹೊಂದಿರಬೇಕಾದುವು ಎಂದು ಎಲ್ಲಿಯ ತನಕ ಅವನು ತಿಳಿಯಲಾರನೋ, ಅಲ್ಲಿಯ ತನಕ ತನ್ನ ಜೀವನದ ಬೆಲೆಯೂ ಅವನಿಗೆ ತಿಳಿಯದು.

**ಸ್ವಾರ್ಥದ ಮಿತಿ**

ವ್ಯಕ್ತಿಗೆ ಸ್ವಾರ್ಥ ಬೇಡವೆಂದರೂ-ತನ್ನ ಬದುಕನ್ನು ಹಸನುಮಾಡಿಕೊಳ್ಳುವಷ್ಟು, ತನ್ನ ಜೀವವನ್ನು ಉಳಿಸಿಕೊಳ್ಳುವಷ್ಟು, ಸ್ವಾರ್ಥ ಇರಬೇಕಾಗುತ್ತದೆ. ಆದರೆ ತನ್ನ ಪಾಲು, ಯಾವತ್ತೂ ಜೀವಗಳ ಪಾಲನ್ನು ಹೊಂದಿಕೊಂಡಿದೆ ಎನ್ನುವುದನ್ನು ತಿಳಿಯದೆಹೋಗುವಾತ, ತನ್ನ ಪಾಲಿನ ಮಿತಿಯನ್ನು ತಿಳಿಯಲಾರ. ಇತರ ಪ್ರಾಣಿಗಳ ಜೀವನಕ್ಕೂ ನಮ್ಮ ಜೀವನಕ್ಕೂ ಕಾಣುವ ಮುಖ್ಯ ತಾರತಮ್ಯವೇ ಇದು. ಉಳಿದ ಜೀವಿಗಳು ತಮ್ಮ ಹೊಟ್ಟೆಯ ಪೂರೈಕೆಯಾದ ಬಳಿಕ ಸುಮ್ಮನಿರುತ್ತವೆ. ತಮ್ಮ ಮಿತಿಯನ್ನು ತಿಳಿದು ಕೂಡಿಡುವುವೂ ಉಂಟು. ತಿಂದು ಉಳಿದುದನ್ನು ಬಿಡುವುದುಂಟು. ಮನುಷ್ಯ ಹಾಗಲ್ಲ—ತನಗೆ ಬೇಕಾದುದಕ್ಕಿಂತಲೂ ಇಲ್ಲವೆ ತನ್ನ ಪಾಲಿಗೆ ಸಿಗಬೇಕಾದುದಕ್ಕಿಂತಲೂ ಹೆಚ್ಚಿಗೆ ಬಯಸುತ್ತಾನೆ. ಇದರ ಫಲವಾಗಿ-ಇತರ ಜೀವಿಗಳಿಗೆ ಇಲ್ಲದಂತೆ ಮಾಡುತ್ತಾನೆ. ಮನುಷ್ಯನ ವ್ಯಕ್ತಿತನದ ಅತಿ ಸ್ವಾರ್ಥ ಕಲ್ಪನೆಯಿಂದಲೇ ಧನಸತ್ತೆ ಉದಯಿಸಿತು. ಅದರ ಒಂದಿಲ್ಲ ಒಂದು ರೂಪ ಇಂದು ಮನುಷ್ಯ ಕುಟುಂಬದ ಮುಕ್ಕಾಲು ಮೂರು ವೀಸ ಪಾಲು ಸುಖವನ್ನು ಅಪಹರಿಸಿಬಿಟ್ಟಿದೆ. ಮನುಷ್ಯನು ಇಂದು ಬದುಕನ್ನು ಕಣ್ಣೀರಿನ ಸಂತೆಯನ್ನಾಗಿ ಮಾಡಲು-ಈ ಚಟವೇ ಕಾರಣ. ಇಂದು ಮಾನವ ಕೋಟಿಯ

ಬಹು ಭಾಗದ ಶ್ರಮ, ಅವನ ಚಿಂತೆಗಳು, ಹೊಟ್ಟೆಯ ಪಾಡಿಗಾಗಿಯೇ ಮೀಸಲಾಗಿವೆ.

**ಬಲಶಾಲಿಗಳು**

ಪ್ರಾಣಿಗಳಿಗೂ ಸ್ವಾರ್ಥವಿದೆ. ಅವು ಬದುಕಲು ಆಹಾರ ಸಂಗ್ರಹಿಸುತ್ತವೆ. ಆದರೆ ನಾಳೆಗೆ, ನಾಡಿದ್ದಿಗೆ–ಎಂದು ಇಂದೇ ಊರನ್ನು ಸೂರೆಮಾಡುವುದಿಲ್ಲ. ಇಂದಿನ ಸಮೃದ್ಧಿಯಲ್ಲಿ ಎಲ್ಲರಿಗೂ ಪಾಲಿದೆ. ನಾಳಿನ ಕ್ಷಾಮದಲ್ಲೂ ಎಲ್ಲರಿಗೂ ಪಾಲಿದೆ.

ಆದರೆ ಮನುಷ್ಯ ಪ್ರಪಂಚದಲ್ಲಿ ಜೀವರು-ತಮಗೆ ಬೇರೆಯೇ ಆತ್ಮ ನಿರ್ಮಾಣ ಮಾಡಿಕೊಂಡರು. ಅವರ ಇಹ ಪರಗಳೆರಡನ್ನೂ ಈ ಕಲ್ಪನೆ ಬಾಧಿಸಿತು. ಬಲಿಷ್ಠರಾದ ನಾಲ್ಕು ಆತ್ಮಗಳು ಸಾಮಾನ್ಯ ಜನರ ಸುಖ ಸಾಧನಗಳನ್ನೆಲ್ಲ, ತಮ್ಮ ಮುಷ್ಟಿಯಲ್ಲಿ ಇರಿಸಿಕೊಂಡು, ಉಳಿದವರಿಗೆ ದುಃಖವನ್ನು ಕೊಡುವಂತಾಯಿತು. ಇದರಿಂದ ಉಂಟಾದ ಬಡತನದ ಪ್ರಶ್ನೆಯಿಲ್ಲದಿದ್ದರೆ, ಪ್ರಪಂಚದ ಹೆಚ್ಚಿನ ಸೊಗಸುಗಳು ಜನಕ್ಕೆ ದೊರೆಯುತ್ತಿದ್ದುವು. ಈಗ ಜನರ ಹೋರಾಟವೆಲ್ಲ ಅನ್ನಕ್ಕಾಗಿದೆ. ಅವರು ಏನಾದರೂ ಮಾನಸಿಕ ಸುಖದ ಒಡವೆಗಳನ್ನು ಬಯಸಿದರೂ, ಶಕ್ತಿಯುತರು ಅದನ್ನು ಪ್ರತ್ಯಕ್ಷ, ಪರೋಕ್ಷಮಾರ್ಗಗಳಿಂದ ಕಸಿದುಕೊಳ್ಳುವಂತಾಗಿದೆ. ವ್ಯಕ್ತಿಯು ಸಮಾಜದಿಂದ ಬೇರೆಯಲ್ಲ. ಅದರ ಹಿತ, ತನ್ನ ಹಿತ–ಎನ್ನುವುದೇ ಆತನ ಬೆಳವಣಿಗೆಗೆ, ಸುಖಕ್ಕೆ ಅವಶ್ಯಕವಾದ ಹಾದಿ. ಇಲ್ಲಿ 'ಸಮಾಜ' ಎಂದರೆ ಮಾನವ ಸಮಾಜವೆಂದು ತಿಳಿದರೆ ಸಾಕು. ಆದರೆ ಜೀವನದ ಸುಖವನ್ನು ಕುರಿತು ಚಿಂತಿಸುವಾಗ–ಯಾವತ್ತು ಜೀವಕೋಟಿಯೂ ಒಂದೇ ಸಮಾಜವೆನಿಸುತ್ತದೆ.

**ಕೂಡಿಡುವ ಶಕ್ತಿ**

ಬಹು ಯುಗಗಳಿಂದ ಮನುಷ್ಯನ ಆರ್ಥಿಕ ಸಂಸಾರವನ್ನು, ರಾಜಕೀಯವನ್ನು ವ್ಯಕ್ತಿ ಸ್ವಾರ್ಥವೇ ಆವರಿಸಿ ನಿಂತಿದೆ. ಕೂಡಿಡುವ ಶಕ್ತಿ ಅವನಿಗೆ ಬಂದಂದಿನಿಂದ, ಬೆಳವಣಿಗೆಗೆ ಮೃತ್ಯುವಾಗಿ ಬಂದಿದೆ. ಆರಂಭದಲ್ಲಿ ಅನ್ನ ಕೂಡಿಡತೊಡಗಿದ ಮನುಷ್ಯ, ಕೊನೆಗೆ ಅಧಿಕಾರ ಕೊಡುವ ಯಾವತ್ತು ವಸ್ತು ಒಡವೆಗಳನ್ನು ಕೂಡಿಟ್ಟ; ಈ ಸ್ವಾರ್ಥದ ವಿಸ್ತರಣ ನಮ್ಮ ಅನಾದಿ ಕಾಲದ ಧರ್ಮಮತಗಳನ್ನೂ ಆವರಿಸಿಕೊಂಡಿತ್ತು. ಅದೇ ಇಂದು–ತನಗಾಗಿ ಸ್ವರ್ಗವನ್ನು, ಮೋಕ್ಷವನ್ನು ಕೂಡಿಡಲು ಪ್ರೇರಿಸುತ್ತದೆ. ಇಹದಲ್ಲಿ ವ್ಯಕ್ತಿ

ಸುಖ ಜೀವಕೋಟಿಯ ಸುಖದೊಡನೆ ಬೆರೆತಿರುವಲ್ಲಿ, ಪರದಲ್ಲಿಯೂ ಅದು ಬೇರೆಯಾಗಿ ಉಳಿಯಲು ಶಕ್ಯವಿಲ್ಲ, ಪರ ಎಂಬುದು ಇರುವುದಾದರೆ.

ಲಕ್ಷೋಪಲಕ್ಷ ಜೀವಿಗಳ ಸಂಸಾರ ಇದು. ಇವುಗಳಲ್ಲಿ ಕೆಲವೇ ಜೀವಿಗಳು ಪಾರಾಗಲು ಬಂದೀತೆ? ತಮಗೆ ಬೇರೆಯೇ ಆತ್ಮವಿದೆ, ತಾವು ಮಾತ್ರ ಈ ಪ್ರಪಂಚದ ಗೊಂದಲದಿಂದ ಪಾರಾಗಬಲ್ಲೆವು—ಎಂದು ತಿಳಿಯುವುದಾದರೂ ಎಷ್ಟು ಸ್ವಾರ್ಥ! ಯಾವ ಜೀವಿಯೂ ವಿಶ್ವ ಶರೀರದಿಂದ ಕಳಚಿ-ಬೇರೆಯೇ ಸ್ವರ್ಗ, ಮೋಕ್ಷ ಕಲ್ಪಿಸಲು ಬರಲಾರದು. ಪ್ರಪಂಚವು ಬಂಧನದಲ್ಲಿರುವುದೆಂದು ತಿಳಿದರೂ—ಅದು ಸಾಧ್ಯವೇ? ಸಮವೇ?

**ಒಟ್ಟು ಸಮಾಜವೇ ಬಲಿ**

ಹಿಟ್ಲರನ ಜರ್ಮನಿಯಲ್ಲಿ, ಒಬ್ಬ ವ್ಯಕ್ತಿ ತನ್ನದೇ ಆದ ರಾಜಕೀಯವನ್ನು ಕಟ್ಟಿ ಸಾಧಿಸಬಲ್ಲನೇ? ಗುಲಾಮತನಕ್ಕೆ ಬಲಿಯಾದ ತಮ್ಮ ದೇಶದಲ್ಲಿ ಒಬ್ಬೊಬ್ಬನೇ ಸ್ವತಂತ್ರನಾಗುವುದೆಂಬುದು ಸಾಧ್ಯವೇ? ಜರ್ಮನಿಯಲ್ಲೆಂದೇ ತಿಳಿಯುವ-ಹಿಟ್ಲರನ ಜನಾಂಗ ನೀತಿಯನ್ನು ಒಪ್ಪದವರೂ ಇದ್ದರು ಅವರೆಲ್ಲ "ನಮಗೆ ರಾಜ್ಯ ವಿಸ್ತರಣ ಬೇಡ; ನಾವು ಎಲ್ಲರಂತೆಯೇ ಇರುತ್ತೇವೆ" ಎಂದಿದ್ದರೆ ಆ ಮಾತು ನಡೆಯುವಂತಿತ್ತೇ? ಎಲ್ಲಿಯ ತನಕ ಅವರ ಮಾತು ಜನತೆಯ ಮಾತಾಗಿ ಪರಿಣಮಿಸದೋ ಅಲ್ಲಿಯ ತನಕ ಅದು ನಡೆಯಲಾರದು. ಅಲ್ಲಿಯ ತನಕ ಹಿಟ್ಲರನಂಥವರ ರೀತಿಗಳ ಭಾರ ಅವರ ಮೇಲೆಯೂ ಬೀಳುತ್ತದೆ. 'ಹಿಟ್ಲರ' ಒಬ್ಬನೇ 'ನಾಜಿ' ನೀತಿಯನ್ನು ಸಾಧಿಸಿದನೇ? ಹಾಗೆ ಸಾಧಿಸಲಾರ. ಜರ್ಮನಿಯು ಹಿಂದಿನ ಅಪಮಾನಗಳಿಂದ ನೊಂದಿತ್ತು. ಅಲ್ಲಿನ ಶ್ರೀಮಂತರು ವ್ಯಾಪಾರ ವಿಸ್ತಾರಕ್ಕಾಗಿ ಹಸಿದಿದ್ದರು. ಅಲ್ಲಿನ ಸೇನಾನಿಗಳು ಕದನಕ್ಕಾಗಿ ಕಾದಿದ್ದರು. ನೆರೆಕರೆಯ ದೇಶದವರೂ ಸಾಕಷ್ಟು ಅನುಮಾನ, ಈರ್ಷೆಗಳನ್ನು ಅವರ ಮೇಲೆ ತೊಟ್ಟಿದ್ದರು. ಇವೆಲ್ಲ ಮನೋಭಾವನೆಗಳ ಒಟ್ಟು ಮೊತ್ತ 'ನಾಜಿ' ಉಲ್ಬಣದಲ್ಲಿ ಪರಿಣಮಿಸಿತು. ಕೆಲವರು ತಮ್ಮ ಪ್ರತ್ಯಕ್ಷ ಸಹಾಯದಿಂದ ಅದನ್ನು ಬೆಳೆಯಿಸಿದರು; ಕೆಲವರು ತಮ್ಮ ಶಕ್ತಿಶೂನ್ಯತೆಯಿಂದ ಅದಕ್ಕೆ ತಲೆವಾಗಿದರು. ಹಲವರು ಮುಂದಿನ ಪರಿಣಾಮವನ್ನು ನಿರೀಕ್ಷಿಸಲಾರದೆಯೆ ಉದಾಸೀನರಾದರು. ಇಂದು ಆ ಒಟ್ಟು ಸಮಾಜದ ಕ್ರಿಯೆಗೆ ಎಲ್ಲರೂ ಭಾಗಿಗಳಾಗಿದ್ದಾರೆ. ಪ್ರಪಂಚಕ್ಕೂ ಜರ್ಮನಿಗೂ ಇರುವ ಸಂಬಂಧವನ್ನು ಎಣಿಸಿದಲ್ಲೂ ಹೀಗೇಯೇ ಇದೆ.

## ನಮ್ಮ ದೇಶ

ಅದರಂತೆ ಹಿಂದುಸ್ಥಾನದ ಪಾಡನ್ನು ನೋಡುವ. ನಮ್ಮ ಹಿರಿಯರು, ಅಜ್ಜ, ಮುತ್ತಜ್ಜಂದಿರು–ಪರಕೀಯರನ್ನು ತಮ್ಮ ಸ್ವಾರ್ಥಕ್ಕಾಗಿ ಬರಮಾಡಿಕೊಂಡುದುಂಟು, ತಮ್ಮ ಕುತಂತ್ರ ಸಾಧಿಸಲು ಬರಮಾಡಿಕೊಂಡುದುಂಟು; ಅಜ್ಞಾನದಿಂದ ಹೆರರಿಗೆ ಅವಕಾಶಕೊಟ್ಟುದುಂಟು; ಷಂಢತನದಿಂದ ಮೌನವಾಗಿದ್ದು, ಹಗೆಯ ಬೆಳವಣಿಗೆಯನ್ನು ನೋಡಿದವರುಂಟು. ಒಟ್ಟಿಂದ ಅದು ದೇಶದ ದಾಸ್ಯದಲ್ಲಿ ಪರಿಣಮಿಸಿತು. ಒಟ್ಟಾಗಿ ನಮ್ಮ ಜನಾಂಗ ಈ ದಾಸ್ಯ ಶೃಂಖಲೆಯನ್ನು ಮುರಿಯುವ ಸಾಹಸ ಮಾಡುವ ತನಕ ಅದು ನಮ್ಮನ್ನು ಬಾಧಿಸಿತು. ಹಾಗೆ ಮಾಡದಿರಲು ಏನು ಕಾರಣ? ಸ್ವಾತಂತ್ರ್ಯ ಬಯಸಿ ಶ್ರಮಿಸುವವರು ಕೆಲರು; ಅದು ಬಂದರೆ ಒಳ್ಳೆಯದು—ಎಂದು ಬರಿಯ ಬಯಕೆಯಲ್ಲಿ ತೃಪ್ತರು ಹಲವರು; ಅದಕ್ಕೆ ವಿರೋಧಿಗಳು ಕೆಲವರು. 'ಬರಬೇಕು ನಿಜ, ನಮ್ಮಂತಹವರು ನಮ್ಮ ಹೊಟ್ಟೆಯ ಪಾಲಿಗೆ ದುಡಿಯುವುದು ಮೊದಲ ಕರ್ತವ್ಯ' ಎಂದವರು ಹಲವರು. ಆದುದರಿಂದ ಸ್ವಾತಂತ್ರ್ಯಕ್ಕಾಗಿ ದುಡಿಯುತ್ತಿರುವವರೂ ಬಹುಕಾಲ ಗುಲಾಮರಾಗಿಯೇ ಉಳಿದರು. ಉಳಿದವರೂ ಹಾಗಾದರು. ಜೀವನದಲ್ಲಿ–ರಾಜಕೀಯ, ಆರ್ಥಿಕತೆ, ಧಾರ್ಮಿಕತೆ ಎಂದು ಪಾಲುಮಾಡುವ ಅಂಶಗಳಿಲ್ಲ. ಎಲ್ಲವೂ ಒಂದರೊಡನೊಂದು ಹೆಣೆದು ನಿಂತಿರುವ ಶಕ್ತಿಗಳು.

## ಎರಡನೆಯ ಮಹಾ ಯುದ್ಧ

ಮೊನ್ನೆ ದಿನ ಪ್ರಪಂಚದಲ್ಲಿ ಕಾಣಿಸಿಕೊಂಡಂಥ ಮಹಾ ಉರಿಯು ರಾಷ್ಟ್ರೀಯ ಸ್ವಾರ್ಥ, ಜನಾಂಗಿಕ ಸ್ವಾರ್ಥ, ರಾಷ್ಟ್ರೀಯ ಪ್ರತ್ಯೇಕತೆ, ರಾಷ್ಟ್ರೀಯ ದಾಸ್ಯ, ಜನಾಂಗಗಳ ಪ್ರಾಬಲ್ಯ, ಇವೆಲ್ಲವುಗಳ ಒಟ್ಟು ಮೊತ್ತದ ಪರಿಣಾಮ. ಇದರಿಂದ ಒಬ್ಬೊಬ್ಬರಿಗೇ ಬಿಡುಗಡೆಯಿಲ್ಲ. ಹಾಗೆ ಒಬ್ಬೊಬ್ಬರು ತಪ್ಪಿ ಬಹಳ ದಿನ ನೆಮ್ಮದಿಯಾಗಿ ಉಳಿಯಲಾರರು.

ವ್ಯಕ್ತಿ—ತನ್ನ ಜೀವನದ ಹೊಂದಿಕೆ ತನ್ನ ಕುಟುಂಬದವರ ತನಕ ಇದೆ ಎನ್ನುವಷ್ಟರಮಟ್ಟಿಗೆ ವಿಸ್ತರಿಸಿದ್ದಾನೆ. ಅನ್ನ ಅರಿವೆಗಳ ಜತೆಗೆ, ತನ್ನ ಮನೆ, ಬಳಗದವರ ಅನ್ನ ಅರಿವೆಗಳ ಸಲುವಾಗಿ ದುಡಿಯಲು ಕಲಿತಿದ್ದಾನೆ. ಧರ್ಮಗಳೂ ಹಾಗೇನೆ ಮಾಡುತ್ತಿವೆ. ವ್ಯಕ್ತಿಗತ ಮೋಕ್ಷ, ಸ್ವರ್ಗಗಳನ್ನು ಅವು ಒಪ್ಪುವುದರಿಂದ, ಒಂದು ಜಾತಿಯವರಿಗೋ, ಪಂಗಡದವರಿಗೋ—

ಸ್ವರ್ಗವನ್ನು ಕರುಣಿಸಲು ಒಪ್ಪುತ್ತಿವೆ. ಹಾಗಿಲ್ಲವಾದರೂ, ಅನ್ಯರಿಗೆ ಅದನ್ನು ಅಲ್ಲಗಳೆಯಲು ಸಿದ್ಧವಾಗಿವೆ.

ಮನುಷ್ಯನು ತನ್ನನ್ನು ಬೇರೆಯೇ ಆತ್ಮವಾಗಿ ತಿಳಿದು, ಅದರ ಕರ್ಮಕ್ಕೆ ಅದೇ ಹೊಣೆ ಎಂದು ನಿರ್ಣಯಿಸಿ, ಸಮಾಜದ ಜವಾಬುದಾರಿಯನ್ನು ಹೇಗೆ ಕಳಚಿಕೊಳ್ಳಲು ಕಲಿತಿರಬಹುದು? ವ್ಯಕ್ತಿ ಭವಪಾಶದಿಂದ ತಪ್ಪಲು ಬಯಸುವ ಮನೋವೃತ್ತಿ, ತನ್ನ ಏಕಾಕಿ ಆತ್ಮಸುಖ ಹುಡುಕುವ ಬಯಕೆ–ಇವೆಲ್ಲ ಎಂದೋ ತೊಡಗಿದ ಮಾನವ ಶೀಲದ ವಕ್ರತೆಗಳು. ಈ ವಕ್ರತೆಯು ತಂದಿಕ್ಕುವ ಅನೇಕ ಸಂಕಷ್ಟಗಳನ್ನುಂಡು ಅವನ ಮಾರ್ಗ ತಿದ್ದಬೇಕಾಗಿದೆ. ಅವನ ಪ್ರತ್ಯೇಕತೆಯ ಭಾವನೆಯು ಬದಲಿಸಬೇಕಾಗಿದೆ.

## ವ್ಯಕ್ತಿ, ಗುಂಪು

ಮನುಷ್ಯ ಇತರ ಜೀವಿಗಳಂತೆಯೇ ಒಂದು ಜೀವಿ. ಆ ಜೀವಿಯು ತನ್ನ ಬಾಳ್ವೆಯಿರುವಷ್ಟು ದಿನ, 'ಸ್ವತಂತ್ರ'ವೆನಿಸಿಕೊಳ್ಳುವ ಶಕ್ತಿಗಳಿಂದ ಕೂಡಿರುವುದೂ ನಿಜ. ಆಳವಾಗಿ ಪರಿಶೀಲಿಸಿದಲ್ಲಿ ಅವೂ ಸಾಮಾಜಿಕವಾದುವು. ಆದರೂ–ವ್ಯಕ್ತಿ ಜೀವನದಲ್ಲಿ ವ್ಯಕ್ತಿಯದೇ ಆದ ಕೆಲವು ಯೋಗ್ಯತೆಗಳು ಕಂಡುಬರುತ್ತವೆ. ಇದರಿಂದ ಒಂದು ವ್ಯಕ್ತಿಯು ಇನ್ನೊಂದು ವ್ಯಕ್ತಿಗಿಂತ ಭಿನ್ನನಾಗಿ ಕಾಣಿಸುತ್ತಾನೆ .ಆದರೂ ಅವನ ಸುಖ, ದಃಖ ಗುಂಪಿನ ಸುಖ, ದು:ಖದೊಡನೆ ಬೆರೆತಿದೆ. ವ್ಯಕ್ತಿಯಾದವನ ಹಿರಿಮೆಯಿಂದ ಗುಂಪಿನ ಹಿರಿಮೆಯೂ, ವ್ಯಕ್ತಿಯ ಕಿರಿಮೆಯಿಂದ ಗುಂಪಿನ ಕಿರಿಮೆಯೂ ಉಂಟಾಗುತ್ತವೆ. ವ್ಯಕ್ತಿಗೆ 'ಗುಂಪು' ಬೆಂಬಲವಾಗಿರಬೇಕು.

ಆದರೂ, ಹಲವು ಅವಾಂತರಗಳು ಮನುಷ್ಯನ ಗುಂಪಿಗೆ ಇದಿರಾಗುವಾಗ, ಯೋಚಿಸಬಲ್ಲ ಆತನ ಮನಸ್ಸಿಗೆ, ತಾನು ಸಣ್ಣವ, ತನ್ನ ಗುಂಪು ಚಿಕ್ಕದು–ಎಂಬ ಭಾವನೆಯುಂಟಾಗುತ್ತದೆ. ತನ್ನಂತೆಯೇ ಗುಂಪಾಗಿ ಇದಿರು ಬರುವ ಗುಂಪಿನೊಡನೆ ಕಾದಾಡಿ, ತನ್ನ ಬಲುಮೆಯನ್ನು ಅವನು ಸ್ಥಾಪಿಸ ಬಯಸುವುದುಂಟು. ಬದಲು, ನಿಸರ್ಗದ ಆಕ್ರೋಶಗಳು ಅವನನ್ನು ಇದಿರಿಸುವಾಗ—ಅವನಿಗೆ ತನ್ನ ಸಣ್ಣತನ ಹೊಳೆಯುತ್ತದೆ. ಭೂಕಂಪ, ಜಲಪ್ರಳಯ, ಅಗ್ನ್ಯುತ್ಪಾತ, ಸಿಡಿಲು, ಬಿರುಗಾಳಿ–ಇವುಗಳು ಅವನನ್ನು ಅಲ್ಪನನ್ನಾಗಿ ಮಾಡಿತೋರಿಸುತ್ತವೆ. ಆಗ ತನ್ನ ಗುಂಪೂ ತನ್ನನ್ನು ಉಳಿಸಲಾರದು— ಎಂದು ಅವನಿಗೆ ತೋರಿಬರುತ್ತದೆ. ಗುಂಪಿನಿಂದ ತಾನು ಬೇರೆ

ಉಳಿದರೂ ಪಾರಾಗಲಾರೆ-ಎಂದು ಅವನಿಗೆ ಗೋಚರಿಸಬೇಕಿತ್ತು. ಆದರೆ ತನ್ನ ಸಾವನ್ನು ತಾನು ಇದಿರಿಸಲು ಅಂಜಿ, ತನ್ನನ್ನು ಕುರಿತು ಬಹುವಾಗಿ ಚಿಂತಿಸಿ, ಗುಂಪು ಬದುಕಲಿ, ಬದುಕದಿರಲಿ, ತಾನಾದರೂ ಬದುಕಿಯೇನೆ-ಎಂದು ಯೋಚಿಸಲು ಆತ ಕಲಿತಿದ್ದಾನೆ. ಸಾವು ಬರುವಾಗ 'ತನಗೆ ತಾನು' ಎಂಬ ಭಾವನೆ ಅವನಲ್ಲಿ ಮೊಳೆತಿರಬೇಕು. ಆ ಸಂಬಂಧವಾದ ಜ್ಞಾನವೆಲ್ಲ 'ವ್ಯಕ್ತಿ ಆತ್ಮ' ಎಂಬುದರ ತಳಹದಿಯ ಮೇಲೆ ಬೆಳೆದುಬಂದಿರಬೇಕು.

**ಸ್ವಾರ್ಥದ ರೀತಿ**

ಹೀಗೆ ತನ್ನ ಸಣ್ಣತನ, ತನ್ನ ಉಳಿಗಾಲ—ಇವುಗಳನ್ನು ಅವನು ಯೋಚಿಸುತ್ತ ಬರುವುದು ಸಹಜ; ಅವನ್ನು ರಕ್ಷಿಸಲು ಪ್ರಯತ್ನಿಸುವುದೂ ಸಹಜ. ತನಗೆ ಇದಿರಾಗಿ, ಮಹತ್ತಾಗಿ ಕಾಣಿಸುವ-ಈ ಪ್ರಪಂಚವೇನು, ಅದರ ಶಕ್ತಿಗಳೇನು—ಎಂದು ಆತ ತನ್ನ ಇದಿರಾಳಿಗಳನ್ನೂ ಕುರಿತು ಯೋಚಿಸುತ್ತಾನೆ. ತನಗೆ ಅನುಕೂಲವಾಗುತ್ತಿರುವ ಶಕ್ತಿಗಳನ್ನು ಕುರಿತು—ಅಂದರೆ ಮಳೆಬೆಳೆಗಳನ್ನು ಕುರಿತು ಯೋಚಿಸುತ್ತಾನೆ. ಅವುಗಳಿಗೆಲ್ಲ ತನಗಿರುವಂತೆ ಒಂದೊಂದು, ಮಹಾ ಆತ್ಮವನ್ನು ಆರೋಪಿಸಿ, ಅವುಗಳ ದೊಡ್ಡಸ್ತಿಕೆಯ ಎದುರು ತನ್ನ ಕಿರಿಮೆಯನ್ನು ಹಿಡಿದು ನೋಡುತ್ತಾನೆ. ಕೊನೆಗೆ ಒಂದಿಲ್ಲ ಒಂದು ದಿನ, ನಾಶವಾಗಲೇಬೇಕಾದ ತನ್ನ ಜೀವನದ ಗುರಿಯೇನು-ಎಂದು ಯೋಚಿಸುತ್ತಾನೆ. ತನ್ನ ಹುಟ್ಟು ಏತಕ್ಕಾಯಿತು, ಜೀವನ ಏತಕ್ಕಾಗಿದೆ-ಎಂದು ತಿಳಿಯುವುದೇ ತನ್ನ ಕರ್ತವ್ಯ-ಎಂದು ಭಾವಿಸುತ್ತಾನೆ. ಆ ಜೀವನಗಳನ್ನು ಹೊಂದಿರುವ ಜೀವನ ಯಾತ್ರೆಯ ಉದ್ದೇಶವೇನು?-ಎಂದೂ ಪ್ರಶ್ನಿಸುತ್ತಾನೆ. ಇವುಗಳ ಗುಟ್ಟು ತನಗೆ ತಿಳಿದಲ್ಲಿ, ತಾನು ಈ ಬದುಕಿನ ಅನೇಕ ವೈರಿಗಳ ಎದುರು ತೊಳಲಾಡಬೇಕಾಗಿಲ್ಲವಲ್ಲ—ಎಂದೆಣಿಸಿ, ತನ್ನ ಆತ್ಮ ರಕ್ಷಣೆಯ ಉಪಾಯವನ್ನು ಚಿಂತಿಸುತ್ತಾನೆ. ಅಲ್ಲಿಂದ ಮುಂದೆ—ಅವನಿಗೆ ಆ ಆತ್ಮರಕ್ಷಣೆಯ ವಿಚಾರವಲ್ಲದೆ ಉಳಿದ ಜೀವಿಗಳ ಸುಖದುಃಖಗಳಲ್ಲಿ ಪಾಲುಗಾರನಾಗುವ ಇಚ್ಛೆ ಬರಲಾರದು.

**ಅಳತೆಗೆ ಮೀರಿದ್ದು**

ಮನುಷ್ಯ ತನ್ನ ಬಾಳ್ವೆಯ ಉದ್ದೇಶವನ್ನು ತಿಳಿಯಲೆತ್ನಿಸುವಂಥ ಹಂಬಲದಲ್ಲಿ ಸೋಜಿಗವಿಲ್ಲ; ಸಹಜತೆಯೂ ಇದೆ. ಅದಕ್ಕೂ ಮುಂದುವರಿದರೆ-ವಿಶ್ವದ ಉದ್ದೇಶವನ್ನು ಕುರಿತು ತಿಳಿಯಲು ಹಂಬಲಿಸುವುದರಲ್ಲಿ—

ಮಾತ್ರ ಚೋದ್ಯವಿದೆ. ಅವನು ತನ್ನ ಅಳತೆಯನ್ನು ಅತಿಯಾಗಿ ಹಿಗ್ಗಿಸಿ ತಿಳಿದಿರಬೇಕೆಂದು ಕಾಣುತ್ತದೆ. ವಿಶ್ವ ಚಿಕ್ಕದೂ ಅಲ್ಲ, ಅದರ ವ್ಯಾಪಾರಗಳು ಬರಿಯ ಇಂದಿನವೂ ಅಲ್ಲ; ಈಗಾಗಲೇ ನಿರ್ಧಾರವಾಗಿ, ಕರತಲಾಮಲಕ ವಾಗಿ ಬಿಡುವಂತಹದೂ ಅಲ್ಲ.

ನಮ್ಮ ಭೂಮಿಯೊಂದೇ ವಿಶ್ವವೇ? ಇಂದು ವಿಜ್ಞಾನ ನಮಗೆ ವಿಶ್ವದ ಅನೇಕ ಸಂಗತಿಗಳನ್ನು ತಿಳಿಸತೊಡಗಿದೆ. ಭೂಮಿಯ ಒಂದು ಧೂಳಿನ ಕಣ –ವಿಶ್ವದ ಮುಂದಕ್ಕೆ. ನನಗೆ ಕಾಣಿಸುವ ವಿಶ್ವದ ವ್ಯಾಪಾರಗಳು ಕೋಟಿ ಗಟ್ಟಲೆ. ಅದರಲ್ಲಿನ ಲೋಕಗಳು ಬ್ರಹ್ಮಾಂಡ ಗಾತ್ರದುವು. ಸೂರ್ಯನಿಗಿಂತ ಹಿರಿದಾದ ಲೋಕಗಳಿವೆ. ಅವುಗಳ ರೂಪದರ್ಶನವೇ ನಮಗೆ ತಿಳಿಯದಷ್ಟು ದೂರದಲ್ಲಿವೆ. ನಮಗೆ ಪರಿಚಿತವಾದ ಭೂಮಿಯೂ ಪೂರ್ಣವಾಗಿ ನಮ್ಮ ಎಟುಕಿಗೆ ಸಿಕ್ಕಿಲ್ಲ. ಅಲ್ಲಿ ವಿಕಸನಗೊಂಡಿರುವ ಜೀವಕೋಟಿಗಳಲ್ಲಿ, ಬರಿ ಗಣ್ಣಿಗೆ ಕಾಣಿಸುವುವೆಷ್ಟು? ಕಾಣಿಸದುವೆಷ್ಟು? ಕಂಡವುಗಳ ಪರಿಚಯ ವಾದರೂ ನಮಗೆಷ್ಟರಮಟ್ಟಿಗೆ ಇದೆ? ಅಲ್ಲದೆ–ನಿನ್ನೆಯ ಹಲವು ಯುಗಗಳ ಜೀವನವು ಇಂದಿನದಕ್ಕೆ ಕಾರಣವಾಗಿದೆ. ಇಂದಿನದು ನಾಳೆಗೆ ಕಾರಣ.... ತಿರುಗಿ ಅದು ನಾಡಿದ್ದಿನ ತಾಯಿ. ಹೀಗಿರುತ್ತ ಎಲ್ಲ ಜೀವಿಗಳ ಹೇತುವೇನು —ಎಂದು ತಿಳಿಯುವುದು, ನಮ್ಮ ಮಿತ ಶಕ್ತಿಗೆ ಎಟುಕವಾದ ಸಂಗತಿ.

### ಬೆಳೆಯುತ್ತಿರುವ ಲೋಕ

ಅಲ್ಲದೆ ವಿಶ್ವದ ಇದೀಗಲೆ ಮುಗಿಯುವ ಸಂಗತಿಯೇ? ವಿಜ್ಞಾನ ನಮ್ಮ ಭೂಮಿಯ ಜೀವ ವಿಕಾಸದ ಮೇಲೆ ತೋರಿದ ಬೆಳಕಿನಿಂದ, ನಮಗೆ ತೀರ ನಾಳಿನ ನೋಟ ದೊರೆಯದೆಂದೇ ಸ್ಪಷ್ಟವಾಗುತ್ತದೆ. ನಿನ್ನೆಯ ದಿನ ಇಂದಿಗೆ ಕಾರಣವಾಗಿದೆ. ನಿನ್ನಿನ ಪರಿಸ್ಥಿತಿಗಳಿಂದ ಇಂದಿನವು ಕಲ್ಪಿತ ವಾಗಿವೆ. ಇಂದಿನದರಿಂದ ನಾಳೆ ಎಂಬುದು ಉಂಟಾಗಬೇಕು. ನಿನ್ನೆಯಂ ತೆಯೇ ಇಂದು ಇಲ್ಲ. ವಿಕಾಸದ ಹಾದಿ ಇದನ್ನೆಲ್ಲ ತೋರಿಸುತ್ತದೆ. ಕಪಿಯು ಮಾನವನ ಹಿರಿಯನಾಗಿದ್ದಂತೆ, ಇಂದಿನ ಮಾನವನು ನಾಳಿನ ಇನ್ನಾರದೋ ಹಿರಿಯನು. ಈ ದೂರವನ್ನು ಎಷ್ಟು ಮುಂದೆ ಹರಿಯಿಸುತ್ತೇವೋ ಅಷ್ಟು ಮುಂದಿನದು ಅನಿರ್ಣಿತ, ಅನಿಶ್ಚಿತವಾಗಿದೆ. ಅದೆಲ್ಲ ಇಂದಿನ ಮೇಲಿಂದ ಮಾತ್ರವಲ್ಲ, ನಾಳೆಯ ಜೀವನದಿಂದಲೂ ರೂಪಿತವಾಗಬೇಕು. ಹೀಗಿರುವಲ್ಲಿ ವಿಶ್ವದ ಗುರಿಯು ನಮ್ಮ ಹದ್ದನ್ನು ಮೀರಿದ ಕಾಂಕ್ಷೆ; ಎಟುಕಲಾರದ ನೋಟ.

ಅದೇನೆ ತನ್ನ ಗುರಿಯನ್ನು ನಿರ್ಣಯಿಸಿಕೊಂಡಿರಲಾರದು. ನಾವು ಬಲ್ಲವ ರಂತೆ, ಆ ಗುರಿ "ಸಂಸಾರದಿಂದ ಬಿಡುಗಡೆಗೊಂಡು ಪರಮಾತ್ಮನನ್ನು ಸೇರು ವುದು" ಎಂದು ಸಾರಿದರೆ, ಅಪಹಾಸ್ಯವಾದೀತು. ಈ ಯಾವತ್ತು ಜೀವ ಕೋಟಿ, ತನ್ನ ವಿನಾಶದ ಕಡೆಗೆ ಮಾಯೆಗೆ ಕಟ್ಟುಬಿದ್ದು ಓಡುತ್ತಿದೆ, ಕೆಲವೊಂದು ಮಾನವ ಪಂಡಿತರು ಮಾತ್ರ ಇದನ್ನು ಅರಿತು ಪಾರಾಗಲೆತ್ನಿಸು ತ್ತಿದ್ದಾರೆ-ಎನ್ನಲೇ? ನಿಜಕ್ಕೂ ಹಾಗಿರುವುದಾದರೆ, ನನ್ನಂಥ ಒಂದು ಜೀವಿ— ಹಲವರ ಸಾವುಗಳಲ್ಲಿ ನನ್ನದೂ ಸೇರಲಿ; ಅವರ ಹಾನಿಗಳಲ್ಲಿ ನನಗೂ ಪಾಲು ಇರಲಿ; ಅವರನ್ನು ಬಿಟ್ಟು ಪಡೆಯುವ ಯಾವ ಸುಖವೂ ನನಗೆ ಬೇಡ—ಎಂದು ತಿಳಿದಾನು.

### ತತ್ತಿಯಂತೆ

ನಮ್ಮ ಪಾಲಿಗೆ ನಮ್ಮ ಭೂಮಿ ಬಲು ದೊಡ್ಡದು. ಕೋಳಿಮರಿಯ ಪಾಲಿಗೆ ಅದು ಮೊಟ್ಟೆಯೊಡೆಯುವ ಮೊದಲು ಮೊಟ್ಟೆಯೇ ಬಲು ದೊಡ್ಡ ದೆನಿಸೀತು. ವಿಶ್ವದಲ್ಲಿ ಈ ಭೂಮಿ ಧೂಳಿನ ಕಣ. ಅಸಂಖ್ಯ ಗ್ರಹಗಳು, ತಾರೆಗಳು, ಸೂರ್ಯರು ಇರುವ ವಿಶ್ವದಲ್ಲಿ—ಜೀವಿಗಳೆಂಬುವೂ ಮಾನವ ರೆಂಬವರೂ ಭೂಮಿಯಲ್ಲಿ ಮಾತ್ರ ಇದ್ದಾರೆನ್ನಲೇ? ಅವರ ತಿಳಿವೇ ಪರ ಮಾವಧಿಯೆನ್ನಲೇ? ಭೂಮಿಯೇ ವಿಶ್ವದ ಕೇಂದ್ರವೆಂದು ಮಾನವನ ಜ್ಞಾನ ನಿರ್ಣಯಿಸಿದ್ದಂಥ ಕಾಲದಲ್ಲಿ, ಆ ಮಾತಿಗೆ ಬೆಲೆಯಿದ್ದಿರಬಹುದು. ಈಗ ಬೆಲೆ ಬರಲಾರದು.

ನಮ್ಮ ವಿಶ್ವದೊಳಗಿನ ಒಂದು ಲೋಕ ಇನ್ನೊಂದಕ್ಕೆ ಹೊಡೆದು ಎಂದೂ ಧೂಳಾಗಲೂಬಹುದು. ಅದರಿಂದಲೇ ಭೂಮಿಗಳು, ಲೋಕಗಳು ಹುಟ್ಟುತ್ತವೆ, ನಾಶವಾಗುತ್ತಿವೆಯಂತೆ. ಹಾಗೆ ನಮ್ಮ ಭೂಮಿಯೂ ಧ್ವಂಸ ವಾಗುವುದು ದೊಡ್ಡದೇ? ಆಗ ಇಲ್ಲಿನ ಜೀವಿಗಳೆಲ್ಲ ನಾಶವಾಗಬಹುದು. ಅದರಿಂದ—ವಿಶ್ವದ ಗುರಿಯು, ಇಂಥ ಭೂಮಿಗಳು ನಷ್ಟವಾದರೂ ಕೆಡ ದಷ್ಟು ಮುನ್ನೋಟದ್ದೂ, ನಮ್ಮ ಅಳವಿಗೆ ದೊರಕದ್ದೂ ಇರಬೇಕು-ಎಂದು ಊಹಿಸಬೇಡವೇ?

### ತನ್ನ ಆದರ್ಶ ವಿಶ್ವದ್ದೇ

ಮನುಷ್ಯ ತನ್ನ ಬದುಕಿನ ಸ್ಥಾನವನ್ನು ತಿಳಿದರೆ ಸಾಲದೇ? ಅದನ್ನು ಬಾಳಲು ಬಯಸಿದರೆ ಸಾಲದೇ? ಇತರ ಜೀವಿಗಳಿಗಿಂತ ತನ್ನನ್ನು ಪ್ರಧಾನ

ವಾಗಿರಿಸಿಕೊಳ್ಳುವುದು; ತನ್ನ ಜನವನ್ನು ಇತರರಿಗಿಂತ ಮೇಲಿರಿಸುವುದು; ತನ್ನ ಪ್ರಪಂಚವನ್ನು ವಿಶ್ವಕ್ಕೆ ಆದರ್ಶವಾಗಿ ಹಿಡಿಯುವುದು—ಇವು ಯಾವುವೂ ಸತ್ಯ ಹುಡುಕುವ ವ್ಯಕ್ತಿಗೆ ಸಮನಾದ ದಾರಿಗಳಲ್ಲ. ಅವನ ಬೆಳವಣಿಗೆಗೆ ತಡೆಯೊಡ್ಡುವ ಹಾದಿಗಳು. ಮನುಷ್ಯ ತನ್ನ ಜನಾಂಗವನ್ನು ಇತರರಂತೆ ತಿಳಿಯಲಿ; ತನ್ನನ್ನು ಇತರ ಜೀವಿಗಳ ಸಾಲಿನಲ್ಲಿರಿಸಿಕೊಳ್ಳಲಿ. ಇತರ ಜೀವ ಕೋಟಿಗಳು ತಮ್ಮ ಗೊತ್ತನ್ನು ಸಾಧಿಸುತ್ತಿರುವುವೋ ಇಲ್ಲವೋ—ಎಂದು ನಾವು ಹೇಗೆ ತೀರ್ಮಾನಿಸಬಲ್ಲೆವು? ಉಳಿದೆಲ್ಲ ಜೀವಿಗಳ ಬದುಕಿನ ಬಗೆಯನ್ನು ಎಷ್ಟು ಹೆಚ್ಚಾಗಿ ನಾವು ತಿಳಿಯುತ್ತೇವೋ, ಅಷ್ಟು ಹೆಚ್ಚಾಗಿ ನಮ್ಮ ಜೀವನದ ಹಿತವನ್ನೂ, ಮಿತಿಯನ್ನೂ ತಿಳಿಯಲು ಸಹಾಯವಾದೀತು.

### ಅರಿವಿಲ್ಲದವರ ಶಕ್ತಿ

ವಿಶ್ವದ ವ್ಯಾಪಾರಗಳಲ್ಲಿ, ನಮಗೆ ಪರಿಚಿತವಾದ ಬದುಕಿನಲ್ಲಿ–ಸ್ವಂತ ಅರಿವು ಬೆಳೆದು ಬಂದಿರುವ ಜೀವಿಗಳೂ ಇವೆ; ಅರಿವು ಕಡಿಮೆಯಾಗಿರುವುವೂ ಇವೆ. ನಮಗೆ ತಿಳಿದಂತೆ ಅರಿವಿಲ್ಲದಂತಹ ನಿಸರ್ಗ ಶಕ್ತಿಗಳೂ ಇವೆ. ಅವು ಏನೇನೋ ತಂತಮ್ಮ ಕೆಲಸಮಾಡುತ್ತಿವೆ. ಅರಿವುಳ್ಳವರ ಕೆಲಸವನ್ನೇ ನಿರ್ನಾಮ ಮಾಡುವ ಬಲ ಅರಿವಿಲ್ಲದ ಆ ಶಕ್ತಿಗಳಿಗಿವೆ. ಅವನ್ನು ತಡೆಯುವ, ಕುಣಿಸುವ ಶಕ್ತಿ ನಮಗಿಲ್ಲ; ಅವುಗಳ ರೀತಿಯ ಅರಿವಿಲ್ಲ. ಇವುಗಳಲ್ಲಿ ಯಾವುದಕ್ಕೆ ಅರ್ಥವಿದೆ? ಯಾವುದಕ್ಕೆ ಇಲ್ಲ? ಇವೆಲ್ಲ ಒಂದರೊಡನೆಂದು ಬೆರತಿರುವುದೂ ಕಾಣುತ್ತದೆ. ನಮಗೆ ಅರ್ಥವಾಗುವ ಬದುಕಿನ ಅಂಶವನ್ನು 'ಮಾಯೆ' ಎನ್ನುವುದರಿಂದ ನಮಗೆ ಜ್ಞಾನ ದೊರಕೀತೇ?

ತಮ್ಮ ಬದುಕನ್ನು ಅಳೆಯುವವರು, ಉಳಿದ ಜೀವಿಗಳಿಗೆ ಸಮಾನವಾದ ಹಕ್ಕನ್ನು ಇರಿಸಿಕೊಂಡು, ಜೀವನವನ್ನು ಅಳೆಯಲಿ. ನಮ್ಮ ಹೆಚ್ಚಿನ ತಿಳಿವು ಈ ಬಗೆಯ ನೋಟಕ್ಕೆ ಸಹಾಯವಾಗಬೇಕು; ನಮ್ಮ ಮೇಲ್ಮೆಯ ಸ್ಥಾಪನೆಗಲ್ಲ.

ವ್ಯಕ್ತಿಯು ಮಾಡಬೇಕಾದ ಬೇರೊಂದು ಕೆಲಸವಿದೆ. ಅವನಿಗೆ ಬಾಳಿನ ಅರ್ಥವಾಗಬೇಕು, ಅದರಲ್ಲಿ ತಾನು ತನ್ನ ಶಕ್ತಿಗೆ ಸಮನಾಗಿ ವ್ಯವಹರಿಸಬೇಕು, ಅದರಿಂದಾಗುವ ಲಾಭವನ್ನು ತಾನು ಹೊಂದಬೇಕು—ಎಂದು ಒಬ್ಬ ತಿಳಿಯುವಲ್ಲಿ, ತನಗೂ ಸುತ್ತಲಿನ ಜೀವನ ಪ್ರವಾಹಕ್ಕೂ, ತನ್ನ ಹಿಂದೆ ಆಗಿಹೋದ ಪ್ರಪಂಚಕ್ಕೂ ಯಾವ ನಂಟುತನವಿದೆ—ಎಂದು ಪರಿಶೀಲಿಸ

ಬೇಕು. ತಾನು ಬೇರೆ, ಅವುಗಳು ಬೇರೆ ಶರೀರಗಳನ್ನು ಪಡೆದು ವ್ಯವಹರಿಸುತ್ತಿರುವುದಾದರೂ, ತನ್ನ ಎಷ್ಟು ಅಂಶ ಸ್ವತಂತ್ರವಾಗಿ ವ್ಯವಹರಿಸಬಲ್ಲುದು? ತನ್ನ ಅರಿವಿನ ಎಷ್ಟು ಭಾಗ—ಇತರರ ಜೀವಿಗಳೊಡನೆ ಹೊಂದಿಕೊಂಡಿದೆ—ಎಂಬುವನ್ನು ತಿಳಿಯಬೇಕು.

ಅದನ್ನು ಚೆನ್ನಾಗಿ ವಿಚಾರಿಸಿದಲ್ಲಿ ಈ ವ್ಯಕ್ತಿ 'ಆತ್ಮ', ವ್ಯಕ್ತಿ 'ಕರ್ಮ', ವ್ಯಕ್ತಿ 'ಪುಣ್ಯ', ವ್ಯಕ್ತಿ 'ಮೋಕ್ಷ'ಗಳೆಂಬ ಭ್ರಮೆ ದೂರಾಗಬಹುದು. ಜೀವನ ಪ್ರವಾಹದೊಡನೆ ನಮ್ಮ ಸಂಬಂಧವು ತೀರ ನಿಕಟವಾದ ಸಂಬಂಧವೆಂದು ತೋರಬಹುದು.



## ೭. ವೈಯಕ್ತಿಕ ಆತ್ಮ; ವೈಯಕ್ತಿಕ ಕರ್ಮ

### ವ್ಯಕ್ತಿ ಆತ್ಮ ಬೇರೆಯಲ್ಲ

ವ್ಯಕ್ತಿಯು ತಾನು ಬೇರೆಯೇ ಎಂದು ತಿಳಿದು, ಆ ಭಾವನೆಯನ್ನು ಬೆಳೆಯಿಸಿಕೊಂಡು ಬಂದಿದ್ದಾನೆಂದೆವು. ಇದರಿಂದ 'ತಾನು' ಸಾಯಲು ಭೀತಿಗೊಳ್ಳುತ್ತಾನೆ. ತನಗೆ ಬೇರೆಯೇ ಹುಟ್ಟಿದೆ, ಸಾವಿದೆ; ತನ್ನ ಕರ್ಮಗಳ ಫಲವಾಗಿ ಅವು ಪ್ರಾಪ್ತವಾಗಿವೆಯೆಂದೂ ತಿಳಿದುಕೊಂಡಿದ್ದಾನೆ. ಈ ಕರ್ಮ ಫಲದ ಕಲ್ಪನೆಯಿಂದ ವ್ಯಕ್ತಿಯ ನಡತೆಯ ಮೇಲೆ ಪರಿಣಾಮವಿದೆ. ಅವನು ಕೆಟ್ಟ ಜನ್ಮಕ್ಕಾಗಿ ಅಂಜಿ ತನ್ನ ದುಷ್ಟನಡತೆಯನ್ನು ತಿದ್ದಿಕೊಳ್ಳಬಹುದು. ಆದರೆ ಮೂಲದಲ್ಲಿ, ತಾನು ಸುತ್ತಲಿನ ಜೀವದಿಂದ ಬೇರೆಯೆಂದು ತಿಳಿಯುವ ಕಲ್ಪನೆಯೇ, ಅವನ ವ್ಯಕ್ತಿಸ್ವಾರ್ಥವನ್ನು ಬೆಳೆಯಿಸಲು ಕಾರಣವಾಗಿದೆ. ಮುಂದೆ ಅದೇ ಸ್ವಾರ್ಥಕ್ಕಾಗಿ ಅವನು ಪರರು ಮಾಡುವ ಕೇಡುಗಳನ್ನು ತಡೆಯಲು ಕರ್ಮಫಲದ ಭೀತಿಯನ್ನು ತೋರಿದರೇನು? ಆ ಅಂಜಿಕೆಯಿಂದ ಮನುಷ್ಯನ ಕುಲ ಇನ್ನೂ ನಿರ್ಮಲಗೊಂಡಿಲ್ಲ. ವ್ಯಕ್ತಿಗೆ ಬೇರೆಯೇ ಆತ್ಮ, ಬೇರೆಯೇ ಕರ್ಮಫಲಾನುಭವಗಳು ಇವೆಯೇ ಎಂಬ ಪ್ರಶ್ನೆಯನ್ನು ನಾವು ವಿಮರ್ಶಿಸಬೇಕು. ಅಲ್ಲಿಂದಲೇ ಉಗಮವಾದ ತಪ್ಪನ್ನು ಮುಂದೆ ತಿದ್ದಲು ಬರಲಾರದು.

### ಜೀವ ಶಕ್ತಿ

ಯಾವತ್ತು ಜೀವಿಗಳು ತಾವು ಹುಟ್ಟಿದುದಿನಿಂದ ಸಾಯುವ ಗಳಿಗೆಯ ತನಕ ಬೇರೆಯೆನಿಸುವ ದೇಹ ತಾಳಿ ವರ್ತಿಸುವುದೆಂಬುದು ನಿಜ. ಅಲ್ಲಿ ವಿವಾದದ ಅಂಶವಿಲ್ಲ. ಆ ದೇಹದೊಳಗೊಂದು ಜೀವನೋ, ಜೀವಾತ್ಮನೋ —ಏನೋ ಒಂದು ವಿಚಿತ್ರ ತೆರನ ಶಕ್ತಿ ನಲಿದಾಡುತ್ತದೆ. ಶರೀರದ ಮೂಲಕ ಅದು ವ್ಯವಹರಿಸುತ್ತದೆ–ಎಂಬುದು ನಿಜ. ಈ ಜೀವ ಶಕ್ತಿಯನ್ನು ಶರೀರದಿಂದ ಎಷ್ಟು ಮಟ್ಟಿಗೆ ಭಿನ್ನಪಡಿಸಬಹುದು; ಶರೀರವು ಸಾವುಗೊಂಡ ಮೇಲೆ ಆ ಜೀವ ಶಕ್ತಿಯು ಸ್ವತಂತ್ರವಾಗಿ ಉಳಿಯಬಲ್ಲುದೇ? ತಿರುಗಿ ಅದು ಇನ್ನೊಂದು ಶರೀರವನ್ನು ಸೇರಿ ವ್ಯವಹರಿಸುತ್ತದೆಯೇ—ಎಂಬೆಲ್ಲ ಪ್ರಶ್ನೆಗಳು ಪ್ರತ್ಯೇಕ ಆತ್ಮದ ಕಲ್ಪನೆಯಲ್ಲಿ ಸೇರಿಕೊಂಡಿವೆ. ಈ ವಿಚಾರಕ್ಕಿಂತ

ಮೊದಲು ಶರೀರದಲ್ಲಿ ನಲಿಯುವಂಥ ಜೀವಶಕ್ತಿ, ಅದನ್ನು ಜೀವಾತ್ಮ ವೆನ್ನಿ ಅಥವಾ ಜೀವ ಎನ್ನಿರಿ, ಇನ್ನಾವುದೇ ಹೆಸರಿನಿಂದ ಕರೆಯಿರಿ—ಅದು ಸ್ವತಂತ್ರವಾದುದೇ? ತನ್ನೆಲ್ಲ ಕ್ರಿಯೆಗಳಿಗೂ, ತಾನಿರುವ ಶರೀರದ ಮೂಲಕ ಪ್ರಕಟಪಡಿಸುವ ಯಾವತ್ತು ಕೆಲಸಗಳಿಗೂ, ಅದೊಂದೇ ಪೂರ್ಣ ಕಾರಣವೇ —ಎಂಬುದನ್ನೂ ಪರ್ಯಾಲೋಚಿಸಬೇಕು. ಆಗ ನಮಗೆ—ಈ ವ್ಯಕ್ತಿ ಜೀವನದ ವ್ಯವಹಾರ ಎಷ್ಟು ಸ್ವತಂತ್ರವಾಗಿ ಕಾಣಿಸುತ್ತದೋ, ಅಷ್ಟೇ ಪರತಂತ್ರದ್ದೂ ಆಗಿ ಕಾಣಿಸಬಹುದು. ಹಾಗಿದ್ದಲ್ಲಿ-ಆತ್ಮ, ಕರ್ಮಫಲಗಳ ವಿಚಾರದಲ್ಲಿನ ನಮ್ಮ ನಂಬಿಕೆಗಳು ಬದಲಾಗಬೇಕಾದೀತು.

### ಶರೀರ-ಅವಯವ

ಈ ವಿಚಾರವನ್ನು ಸ್ಪಷ್ಟಗೊಳಿಸುವ. ನಮ್ಮ ಶರೀರಕ್ಕೆ ಕಿವಿ, ಮೂಗು, ಕಣ್ಣು, ಬಾಯಿಗಳಿವೆ; ಯಕೃತ್ತು, ಉದರ, ಕರುಳು, ಕಲಿಜಗಳಿವೆ. ಇವುಗಳ ಕೆಲಸಗಳೆಲ್ಲ ಬೇರೆಬೇರೆಯಾಗಿವೆ. ಕಣ್ಣು ಮಾಡುವ ಕೆಲಸವನ್ನು ಕಣ್ಣು ಮಾಡಬೇಕು. ಕಣ್ಣೀರು ಸುರಿಸುವಂಥ ಕೆಲಸವನ್ನು ಯಕೃತ್ತು ಮಾಡಲಾರದು. ಕಣ್ಣಿಂದ ಪಿತ್ತರಸ ಉದ್ರೇಕಗೊಳ್ಳಲಾರದು. ಅವಯವ ಗಳು ತಂತಮ್ಮ ಕೆಲಸಗಳ ಮಟ್ಟಿಗೆ ಸ್ವತಂತ್ರವಾಗಿ ಕಂಡರೂ, ಶರೀರದ ಒಟ್ಟು ಬಾಳಿನೊಡನೆ ಅವು ಬದ್ಧವಾಗಿವೆ. ಯಾವುದೋ ಒಂದು ನೋವು ಗೊಂಡರೆ, ಜಡವಾದರೆ, ಉಳಿದವು ಅದರಿಂದ ತೊಡಕಿಗೆ ಗುರಿಯಾಗುತ್ತವೆ. ಹಾಗೇನೆ-ಮನುಷ್ಯ ಸ್ವತಂತ್ರ ಜೀವಿಯಾಗಿ ವ್ಯವಹರಿಸುತ್ತಿರುವುದು ನಿಜ ವಾದರೂ, ನಾಳೆ ಅವನ ಶರೀರದಿಂದ ಕಳಚಿ ಬೇರೆಯೇ ಆಗಿ ನಿಲ್ಲುವ ಆತ್ಮ ಅವನಿಗಿದೆ ಎಂಬುದಾಗಲಿ, ಅವನಲ್ಲಿರುವ ಜೀವಶಕ್ತಿ ಸಂಪೂರ್ಣ ಕ್ರಿಯಾ ಸ್ವಾತಂತ್ರ್ಯವುಳ್ಳದೆಂದಾಗಲಿ ತೀರ್ಮಾನವಾಗುವುದಿಲ್ಲ.

### ವ್ಯಕ್ತಿ ಸ್ವಾತಂತ್ರ್ಯ

ಯಾವುದೇ ಒಂದು ಜೀವಿಯ ಜೀವನ ವ್ಯವಹಾರವನ್ನು ಪರಿಶೀಲಿಸಿ ದಲ್ಲಿ, ಜೀವಿಯ ವೈಯಕ್ತಿಕ ನಡತೆಯೆಂದು ಕಾಣಿಸುವುದರಲ್ಲಿ—ಮೂರು ಬೇರೆಬೇರೆ ಶಕ್ತಿಗಳು ಕೆಲಸ ಮಾಡುವುದು ಕಾಣಿಸುತ್ತದೆ. ಮನುಷ್ಯ ನಾದರೂ ಈ ನಿಯಮಕ್ಕೆ ಅಪವಾದವಾಗಿ ಕಾಣಿಸುದಿಲ್ಲ. ಒಂದು ಬೆಕ್ಕಿನ ಜೀವನವನ್ನು ಪರಿಶೀಲಿಸುವ. ಅದು ಮರಿಯಿದ್ದಾಗ ತಾಯ ಹಾಲನ್ನು ಕುಡಿಯುತ್ತದೆ. ಮುಂದೆ ಇಲಿಯನ್ನು ಬೇಟೆಯಾಡುತ್ತದೆ. ಬೇಟೆ ಇದಿರಿ

ಸುತ್ತದೆ, ತನ್ನ ಶರೀರ ಸ್ಥೈರ್ಯ್ಯವನ್ನು ಕಾಪಾಡುತ್ತದೆ, ಸಂತಾನವನ್ನು ಬೆಳೆಯಿಸಿಕೊಂಡು ಬರುತ್ತದೆ. ಇವುಗಳಲ್ಲಿ ವ್ಯಕ್ತಿ ಸ್ವಾತಂತ್ರ್ಯ ಎಷ್ಟಿದೆ? ಬಾತುಕೋಳಿ ಹುಟ್ಟಿದೊಡನೆ ನೀರಲ್ಲಿ ಈಜುತ್ತದೆ-ಇದರಲ್ಲಿ ಅದರದೇ ಆದ ಕ್ರಿಯೆಯೆಷ್ಟು? ಇವೆಲ್ಲ ಯುಗಯುಗಗಳ ಪರಿಣಾಮದಿಂದ, ಒಂದು ಜೀವಿಯಲ್ಲಿ ಸ್ವಭಾವವಾಗಿ ಹರಿದು ಬಂದಿರುವ ಶಕ್ತಿಗಳು. ವ್ಯಕ್ತಿಯ ಕಾರ್ಯ್ಯವನ್ನು ರೂಪುಗೊಳಿಸುವುದರಲ್ಲಿ ಸಂತಾನಬದ್ಧವಾಗಿ ಬಂದ ಈ ಸ್ವಭಾವಗಳು, ಸಾಕಷ್ಟು ಬಲವಾದ ಪ್ರಭಾವಗಳನ್ನು ಬೀರುತ್ತವೆ. ಅವುಗಳಷ್ಟರಮಟ್ಟಿಗೆ ವ್ಯಕ್ತಿಜೀವನ ಪರಾಧೀನವಾಗಿದ್ದಂತೆಯೇ ಸರಿ. ವ್ಯಕ್ತಿ ಜೀವನದ ಇಂದಿನ ನಡವಳಿಕೆಯಲ್ಲಿ ಹಿಂದಿನ ಯುಗವೇ ಸೇರಿಕೊಂಡಂತಾಯಿತು. ತಿರುಗಿ—ಒಂದೇ ಪ್ರಾಣಿವರ್ಗದ ಜೀವನ ಚರಿತ್ರೆಯನ್ನು ಪರಿಶೀಲಿಸಿದರೆ—ಎಲ್ಲವೂ ಒಂದೇ ತೆರನಾಗಿರುವುದಿಲ್ಲ. ಒಂದೇ ಬೆಕ್ಕಿನ ಮರಿಗಳಲ್ಲಿ ಒಂದೇ ಬಗೆಯ ಶರೀರ ಶಕ್ತಿ, ನರಗಳ ಶಕ್ತಿ ಕಾಣಿಸುವುದಿಲ್ಲ. ಮನುಷ್ಯರಲ್ಲೂ ಹಾಗೇನೆ. ಒಂದೇ ತಾಯ ಮಕ್ಕಳಲ್ಲಿ-ಒಬ್ಬ ದಡ್ಡ, ಒಬ್ಬ ಚುರುಕು, ಒಬ್ಬ ಸೂಕ್ಷ್ಮದೃಷ್ಟಿ, ಒಬ್ಬ ಸ್ಥೂಲದೃಷ್ಟಿ—ಇಂಥ ಗುಣಗಳು ಹುಟ್ಟಿನಿಂದಲೇ ಕಾಣಿಸುತ್ತವೆ. ಇವಕ್ಕೆ ಪೀಳಿಗೆಯ ಹಿರಿಯರು ಕಾರಣ ಎಂದು ತಿಳಿಯಬೇಕು. ಈ ಅನುವಂಶಿಕವಾದ ಗುಣಗಳಿಂದ, ತನ್ನ ಶರೀರ ರಕ್ಷಣೆ, ಸಂತಾನದ ರಕ್ಷಣೆ, ಸಂತಾನದ ಪೋಷಣೆಯಂಥ ಮುಖ್ಯ ಚಟುವಟಿಕೆಗಳು ನಡೆಯುತ್ತವೆ. ಇವುಗಳೆಲ್ಲ ಅನುವಂಶೀಯ ಸ್ವಭಾವಗಳು. ಅವುಗಳ ಜತೆಯಲ್ಲಿ-ಹುಟ್ಟಿನಿಂದಲೂ ಶರೀರದ್ದೇ ಆದ ಶಕ್ತಿಗಳು ಸೇರಿ ಕೆಲಸಮಾಡುತ್ತವೆ. ಹಿರಿಯರಲ್ಲಿ ಫರಂಗಿಯಂಥ ಕಾಯಿಲೆಯಿದ್ದರೆ, ಕ್ಷಯವಿದ್ದರೆ, ಉಬ್ಬಸ ಇದ್ದರೆ, ಅವು ಮಕ್ಕಳಿಗೆ ಬರುವುದುಂಟು. ಇವು ಸ್ವಭಾವಗಳಲ್ಲವಾದರೂ, ಮಾನವರಲ್ಲಿ ಹಿರಿಯರಲ್ಲಿನ ಇಂಥ ದೋಷಗಳು ಮಕ್ಕಳಲ್ಲಿ ಮರುಕಳಿಸುವುದುಂಟು. ಇದರಿಂದ ಸಾಮಾನ್ಯ 'ಕಾಮುಕ'ನಾಗಿರಬಹುದಾದ ವ್ಯಕ್ತಿ, ಹುಟ್ಟುವಾಗಲೇ ನರಗಳ ದೌರ್ಬಲ್ಯ ತಾಳಿ ಹುಟ್ಟಿದಲ್ಲಿ, ಮತ್ತಷ್ಟು ಕಾಮುಕನಾಗಿ ವ್ಯವಹರಿಸಬಹುದು. ಹೀಗಿರುವಲ್ಲಿ—ಅವನ ಸ್ವತಂತ್ರ ಹೊಣೆಯ ಅಳತೆಯೆಷ್ಟು, ಅನುವಂಶೀಯ ಗುಣಗಳ ಹೊಣೆಯೆಷ್ಟು—ಎಂದು ಅಳೆಯ ಬಂದೀತೇ?

**ವ್ಯಕ್ತಿತ್ವ**

ಶರೀರ ಹುಟ್ಟಿಬರುವ ತನಕ ಹೀಗಾಯಿತು. ಮುಂದೆಯಾದರೂ

ಜೀವನು, ನಮಗೆ ಕಾಣಿಸುವಷ್ಟು ಸ್ವತಂತ್ರನೇ? ಸುತ್ತುಮುತ್ತಲಿನ ಆವ ರಣದ ಪ್ರಭಾವ ಅವನ ನಡತೆಯಲ್ಲಿ ಕಾಣಿಸತೊಡಗುತ್ತದೆ. ಬೇಡರ ಕುಟುಂಬದಲ್ಲಿ ಹುಟ್ಟುವ ಮಗು, ನಿತ್ಯ ಬೇಟೆಯನ್ನು ನೋಡಿ ಬೆಳೆಯುವ ಮಗು—ಆಡಗುವುದರಲ್ಲಿ, ಪಶುಪಕ್ಷಿಗಳ ಸ್ವರಾನುಕರಣೆಯಲ್ಲಿ ಬಲು ಬೇಗ ನಿಪುಣನಾಗುತ್ತಾನೆ. ಬೇಟೆಯನ್ನು ಕೊಲ್ಲುವುದರಲ್ಲಿ, ಅದಕ್ಕೆ ಹಿಂಸೆ, ಅನೀತಿಗಳು ಕಾಣಿಸುವುದೇ ಇಲ್ಲ. ಆದರೆ ಅವರಲ್ಲಿ ಹುಟ್ಟಿದೊಂದು ಮಗು ವನ್ನು ಆಚಾರವಂತರ ಮನೆಯಲ್ಲಿ ಬೆಳೆಯಿಸಿಕೊಂಡು ಬಂದುದಾದರೆ-ಅದು ಬೇರೆಯೇ ತೆರನ ಮನೋವೃತ್ತಿಗಳನ್ನು ಪ್ರಕಟಿಸುತ್ತದೆ. ವ್ಯಕ್ತಿ ತಾನು ಪದೇ ಪದೇ ಮಾಡುತ್ತಿರುವ ಕೆಲಸ, ತನ್ನ ಸುತ್ತಲಿನ ಆವರಣಗಳಿಂದ ಹೊಂದುವ ಪರಿಣಾಮ—ಇವೆಲ್ಲವುಗಳೂ ಅವನ ನಡತೆಯ ಅಂಶವಾಗುತ್ತವೆ. ಹೀಗೆ —ಅನುವಂಶಿಕತೆ, ಅಭ್ಯಾಸ, ಪರಂಪರೆ, ಆವರಣಗಳ ಪ್ರಭಾವವನ್ನು ಬಿಟ್ಟು, ಅವುಗಳಿಗೆ ಪ್ರಸಂಗ ಬಂದಾಗ ಇದಿರಾಗಿ ವರ್ತಿಸಬಲ್ಲ ಜೀವಶಕ್ತಿ ಎಷ್ಟಿದೆಯೋ ಅಷ್ಟನ್ನು ಮಾತ್ರ ನಾವು 'ಸ್ವತಂತ್ರ' ಎನ್ನಬಹುದಾಗಿದೆ. ವ್ಯಕ್ತಿಯು ತನ್ನ ಅನುಭವಗಳಿಂದ ತಾನೇ ಬೆಳೆಯಿಸಿಕೊಂಡ ಭಾವನೆಗಳು, ಯೋಚನೆಗಳು, ಅಭ್ಯಾಸಗಳು, ಅನುವಂಶೀಯವಾದ ಇನ್ನಿತರ ಗುಣಗಳ ಮೇಲೆ ಕೃಷಿಗೊಳ್ಳುತ್ತವೆ. ಆದರೆ ಬುಡದ ತಾಯಿ ಬೇರೇ ಬಲವಾಗಿರು ವಷ್ಟು ಕಾಲ, ಅವನ ಕ್ರಿಯೆಗಳು ಅದರಿಂದಲೇ ನಡೆಯಿಸಲ್ಪಡುತ್ತದೆ. ತನ್ನದೇ ಆದ ಗುಣಗಳು, ಅವನಲ್ಲಿ ಅನುವಂಶೀಯವಾಗಿ ಬಂದ ಗುಣ ಗಳೊಂದಿಗೆ ಸೇರಿ ಕೆಲಸ ಮಾಡುವಾಗ, ಇದ್ದರೂ ಉಳಿಯುವುದಿಲ್ಲ. ಅವನ ವ್ಯಕ್ತಿತ್ವ ಎಂಬುದು ತೋರ್ಪಡುವುದು ಆತ ಇತರರಂತೆ ವ್ಯವಹರಿಸಿದಾಗ. ತಾನಿರುವ ಗುಂಪಿಗಿಂತ ಭಿನ್ನವಾಗಿ ನಡೆದಾಗ ಅವನ ಸ್ವಾತಂತ್ರ್ಯ ನಮಗೆ ಕಾಣಿಸುತ್ತದೆ. ಆತ ಪರಂಪರೆಯ ಶೀಲಗಳಿಗೆ ವಿರುದ್ಧವಾಗಿ ಆಚರಿಸಿದಾಗ, ಹೊಸ ಪ್ರಸಂಗಗಳು ಬಂದಾಗ, ಅವನ್ನು ಪರ್ಯಾಲೋಚಿಸಿ ಪರಂಪರೆಯ ನಡತೆಯನ್ನು ಬದಲಿಸಿದಾಗ, ತನ್ನ ಬುದ್ಧಿಬಲದಿಂದ ಹೊಸ ಕನಸುಗಳನ್ನು ಕಟ್ಟಲು ಆತ ಕಾರಣನಾದಾಗ—ಅವನೊಬ್ಬ ಬೇರೆಯೇ ವ್ಯಕ್ತಿ ಅನಿಸುತ್ತಾನೆ. ಇಂತಹ ಪ್ರಭಾವಶಾಲಿಗಳ ವರ್ತತೆಯಿಂದ, ಅವರ ಸಮಾಜದ ವರ್ತನೆಯ ಮೇಲೆ ಪರಿಣಾಮವಾದೀತು. ಆಗ ಅವನ ಮುಂದಿನ ಸಂತಾನದವರ ಮೇಲಿ ಯೂ ಅದರ ಪ್ರಭಾವ ಬೀಳಬಹುದು.

## ಜೀವನ ಪ್ರವಾಹದೊಡನೆ ಬೆರೆತು

ಈ ಪರಿಶೀಲನೆಯಲ್ಲಿ ನಮಗೆ ಸ್ಪಷ್ಟವಾಗುವ ಅಂಶವೆಂದರೆ—ವ್ಯಕ್ತಿ ಜೀವನದ ಬಹುಮಟ್ಟಿನ ಕೆಲಸಗಳು, ಗುಂಪಿನ ಈಗಿನ ಮತ್ತು ಹಿಂದಿನ ಕ್ರಿಯೆಗಳಿಂದ ಪರಿಣಾಮಗೊಂಡ ಸ್ವಭಾವ ಮತ್ತು ಶೀಲಗಳೆಂದು. ಇದರಲ್ಲಿ ವ್ಯಕ್ತಿಯ ಹೊಣೆಗಾರಿಕೆಯು ಅವನ ಬಳಗ, ಪರಂಪರೆ, ಆವರಣಗಳಿರುವಷ್ಟೇ ಇರುತ್ತದೆ; ಒಂದು ಪಾಲು ಮಾತ್ರ ಇವನದು; ಆದಕ್ಕೆ ಮಿಕ್ಕಿಯಲ್ಲ. ಹೀಗಿರಲು ವ್ಯಕ್ತಿಗತವಾದ ಆತ್ಮನ ಪಾಪ, ಕರ್ಮ, ಕರ್ಮಫಲಗಳು ಎಲ್ಲಿಂದ ಉದ್ಭವಿಸಬೇಕು? ವ್ಯಕ್ತಿಗೇನೇ ತನ್ನ ಕರ್ಮದಲ್ಲಿ-ಅನುವಂಶೀಯ ಭಾಗವೆಷ್ಟು, ಆವರಣದ ಹೊಣೆಯೆಷ್ಟು, ವೈಯಕ್ತಿಕ ಹೊಣೆಯೆಷ್ಟು-ಎಂದು ತಿಳಿಯದಿರುವ ವೇಳೆ, ಕರ್ಮಫಲದ ಪರಿಣಾಮ ಹೇಗೆ? ವ್ಯಕ್ತಿಯು ಕೇವಲ ತನ್ನ ಕ್ರಿಯೆಗಳಿಗೆ ತಾನು ಜವಾಬುದಾರನೆಂಬಷ್ಟು ಪ್ರತ್ಯೇಕತನ ಅವನ ಜೀವಕ್ಕಿರುವುದಿಲ್ಲ. ಅವನ ಪರಂಪರೆಯ ಸಾವಿರಾರು ಕ್ರಿಯೆಗಳೂ, ಅವನ ಆವರಣದ ಸಾವಿರಾರು ಕ್ರಿಯೆಗಳೂ, ಅವನ ಮೇಲೆ ಪರಿಣಾಮವನ್ನುಂಟು ಮಾಡುತ್ತವೆ. ಅವನ ಇಂದಿನ ಜೀವನ, ಮತ್ತು ನಡತೆಗಳ ವರ್ಚಸ್ಸು—ಇಂದಿನ ಸುತ್ತಲಿನ ಬದುಕಿನ ಮೇಲೂ, ನಾಳಿನ ಜೀವನದ ಮೇಲೂ ಪರಿಣಾಮ ಮಾಡುತ್ತವೆ. ನಿನ್ನಿನ ಒಳಿತು ಕೆಡುಕುಗಳು ಇಂದಿನ ಮೇಲೆಯೂ, ಇಂದಿನ ಒಳಿತು ಕೆಡುಕುಗಳು ನಾಳೆಯ ಮೇಲೆಯೂ ಪರಿಣಮಿಸುವುವು. ಸಾಮೂಹಿಕ ಜೀವನ ಪ್ರವಾಹದ ಕರ್ಮಫಲವನ್ನು ಆ ಸಾಮೂಹಿಕ ಪ್ರವಾಹವು ಅನುಭವಿಸಬೇಕಲ್ಲದೆ, ಅದರಿಂದ ವ್ಯಕ್ತಿಯ ಕರ್ಮವನ್ನೂ, ಫಲವನ್ನೂ ತೀರ ಬೇರೆಯಾಗಿರಿಸಬಲ್ಲ ಜೀವನದ ರೀತಿಯೊಂದು ಇರದು. ಈ ಸಮಷ್ಟಿ ಜೀವನದಿಂದ ಒಬ್ಬ ವ್ಯಕ್ತಿ ತಾನೊಬ್ಬನೇ ಪಾರಾಗಿ ಉಳಿಯಬಲ್ಲನೆಂಬುದು ಅನುಮಾನದ ಮಾತು. ವ್ಯಕ್ತಿಯ ಶ್ರೇಯಸ್ಸು, ಸುಖ ಮತ್ತು ದುಃಖಗಳು ಜೀವನದ ಒಟ್ಟು ಮಾನವ ಸಮಾಜದ ಶ್ರೇಯಸ್ಸು, ಸುಖದುಃಖಗಳನ್ನು ಹೊಂದಿಕೊಂಡಿವೆಯೆನ್ನಬೇಕು. ತಾನು ಅದರಿಂದ ಬೇರೆಯೆಂದು ತಿಳಿಯುವುದು ಸಮನಾದೀತೆ?

## ಕಳ್ಳತನ

ಯಾವನ ಒಂದೊಂದು ಕ್ರಿಯೆಗೂ-ಅದರ ಹಿನ್ನೆಲೆಯಲ್ಲಿ ನೂರಾರು ಮನಸ್ಸುಗಳ ಪ್ರೇರಣೆಯುಂಟೆಂಬುದನ್ನು ತಿಳಿದಹಾಗಾಯಿತು. ಇವುಗಳನ್ನು

ಕೂಡಿಕೊಂಡು, ಶರೀರದಲ್ಲಿ ವ್ಯಕ್ತವಾಗುವ ಮನಸ್ಸು ಕೆಲಸಮಾಡುತ್ತದೆ. ಬಹುವಾಗಿ ಇದು, ಸಾಮಾನ್ಯ ವ್ಯಕ್ತಿಯಲ್ಲಿ ಆನುವಂಶೀಯತೆಯ ಒಲಕ್ಕೆ ತಕ್ಕಂತೆ ನಡೆಯುವ ಭಾಗ; ಆವರಣದ ಬಲೋದ್ಬಂಧಕ್ಕೆ ಬಲಿಯಾಗುವ ಭಾಗ. ಈಗ ನಾವು ಅಂಥದೊಂದು ಜೀವಿಯ ಕೆಲಸದ ನ್ಯಾಯಾನ್ಯಾಯ ಗಳನ್ನು ಕುರಿತು ಪರಿಶೀಲಿಸುವ. ಒಬ್ಬಾತ ಕಳವು ಮಾಡುತ್ತಾನೆ; ಈ ಕೆಲಸ ವ್ಯಕ್ತಿ ಕರ್ಮ ಸಿದ್ಧಾಂತವನ್ನು ಅನುಸರಿಸಿದರೆ 'ತಪ್ಪು' ಎನಿಸುತ್ತದೆ. ಆತ —ತುಡುಗರ ಕುಲದಲ್ಲಿ ಬೆಳೆದ ಹುಡುಗನಾದರೆ ಅವನಿಗೆ 'ಕಳವು' ತಪ್ಪು ಎಂದು ಸಹ ತೋರುವುದಿಲ್ಲ. ಅವನಿಗೆ ಕಳವು ಮಾಡಿ ಸಿಕ್ಕಿಬೀಳುವುದು ತಪ್ಪು ಎನಿಸೀತು. ಸಾಮಾನ್ಯ ವ್ಯಕ್ತಿಗೆ ಹಾಗೆ ಕಳವು ಮಾಡಲು ಮನಸ್ಸು ಬರ ಲಾರದು. ಯಾವುದೋ ಆಸೆ ಅವನಲ್ಲಿ ಅಧಿಕವಾಗಿ ಕದಿಯುತ್ತಾನೆ; ಮುಂದೆ ಶಿಕ್ಷೆಯ ಭೀತಿಯಿಂದ ಕಳವನ್ನು ಅಲ್ಲಗಳೆಯುತ್ತಾನೆ. ಕದಿಯುವಾಗ ಅದು ಇಂಥವನ ವಸ್ತುವೆಂದು ತಿಳಿದಿದ್ದರೆ ಅವನಲ್ಲಿ ಅಳುಕುಂಟಾಗಲೂಬಹುದು. ಅದು ಯಾರೋ ಬಿಟ್ಟುಹೋದ ವಸ್ತುವಾದರೆ, ಊರಿನ ಮರದ ಒಂದು ಹಣ್ಣಾದರೆ, ಅಂಥ ಅಳುಕೂ ಅವನಿಗೆ ಬರದಿರಬಹುದು. ವ್ಯಕ್ತಿ ನೆರೆಮನೆಯ ತೋಟದಿಂದ ಒಂದು ಹೂವನ್ನು ಕದಿಯುತ್ತಾನೆಂದು ತಿಳಿಯಿರಿ. ಕದ್ದುದು ಹೂವು; ದೇವರ ಪೂಜೆಗಾಗಿ ತೆಗೆದದ್ದು. ಅಂಥ ವೇಳೆಯಲ್ಲಿ ಅದು ಕಳವೆಂದೂ ಅನಿಸದು. ಅವನ ಕಳ್ಳತನವನ್ನು ವಿರೋಧಿಸುವ ನೆರೆಯವನ ಬಯ್ಗಳು, ಅವನಿಗೆ ನಾಸ್ತಿಕ್ಯದ ಚಿಹ್ನೆಯಾಗಿ ಕಾಣಿಸಲೂಬಹುದು. ಇಲ್ಲಿ ಯಾವುದು ಕೆಡುಕುತನ?

ನಾಳೆಯ ದಿನ ಹೂ ಕೊಯ್ದವನೇ, ಹಣ್ಣನ್ನೂ, ಅದರ ಮರುದಿನ ಒಂದು ಪಾತ್ರೆಯನ್ನೂ ಕದಿಯಬಹುದು. ದೇವರಿಗಾಗಿ ಆ ಬಿಂದಿಗೆಯನ್ನು ಕದ್ದಲ್ಲಿ?

### ಹಂಚಿದ ಹೊಣೆ

ಇದರ ಇನ್ನೊಂದು ಚಿತ್ರವನ್ನು ಯೋಚಿಸುವ. ಕಳ್ಳತನ 'ಅಸಾಧು' ಎಂದು ಒಪ್ಪುವ. ಅಷ್ಟರಿಂದಲೂ ಅದರ ಹೊಣೆಗಾರಿಕೆ ಯಾರದ್ದೆಂದು ನಿಶ್ಚಯವಾಗುವುದಿಲ್ಲ. ಒಬ್ಬ ತೀರ ಬಡವನಾಗಿರುತ್ತಾನೆ. ಅವನ ಮನೆ ಯಲ್ಲಿ ಒಲೆ ಹೊತ್ತಿಸಲು ಕಟ್ಟಿಗೆಯಿಲ್ಲ; ಬೇಯಿಸಲು ಕಾಳಿಲ್ಲ; ಉಡಲು ಅರಿವೆಯಿಲ್ಲ. ಆತ ನ್ಯಾಯವಾಗಿ ದುಡಿಯಲು ಯತ್ನಿಸಿದ್ದ. ಎಷ್ಟು ದುಡಿ

ದರೂ ಸಾಕಾಗದು. ಕುಟುಂಬ ಹೊರೆಯಲು ಕಷ್ಟವಾಗುತ್ತಿದೆ. ಹೀಗಾಗಿ-ಒಂದು ದಿನ ತನ್ನವರ ಕಷ್ಟವನ್ನು ಸಹಿಸದೆ, ತಾನು ಮಾಡುವುದು ಸಮವಲ್ಲವೆಂದು ತಿಳಿದರೂ, ನೆರೆಯವರ ಮನೆಯಿಂದ ಕದಿಯುತ್ತಾನೆ. ಅವನಿಗೆ ಸಮಾಜದ ನ್ಯಾಯಕ್ಷೇತ್ರವು ಶಿಕ್ಷೆಯನ್ನು ವಿಧಿಸಬಹುದು. ಆದರೆ ಅವನ ಕ್ರಿಯೆಗೆ ಅವನೊಬ್ಬನೇ ಎಷ್ಟು ಕಾರಣ? ಅವನ ಕಳವಿನ ಹಿಂದೆ "ಹಸಿವು" ಕೆಲಸ ಮಾಡಿದೆ. "ಹಸಿವು" ಅನ್ಯಾಯವೆಂದು ಯಾರೂ ಹೇಳುವಂತಿಲ್ಲ. ಅದು ಸ್ವಾಭಾವಿಕ ಗುಣ. ಅದು ಬಲವಂತದಿಂದ ತನ್ನ ಕೋರಿಕೆಯನ್ನು ಸಾಧಿಸುತ್ತದೆ. ತನ್ನವರಿಗಾಗಿ ಮರುಕ—ಇದೂ ಅಪರಾಧವಲ್ಲ. ಅನುಕರಣೀಯ ಗುಣ. ಅದೆಲ್ಲ ಈ ಕಳವಿಗೆ ನೆರವಾಯಿತು. ಇವುಗಳ ಸೇರಿಕೆಯಿಂದ ಅಪರಾಧ ನಡೆಯಿತು. ಆ ವ್ಯಕ್ತಿಯು 'ಅಪರಾಧಿ'ಯೆಂದು ನಿರ್ಧರಿಸುವ ಮುನ್ನ, ಈ ಕೆಲಸಕ್ಕೆ—ಸಹಾಯಕರಾದ ಇತರ ಹೊಣೆಗಾರರನ್ನು ನಾವು ಹುಡುಕಬೇಡವೇ?

ಮೊದಲಿಗೆ-ಸಮಾಜದ ಸಂಪತ್ತಿನ ಅಂತರಕ್ಕೆ ಕಾರಣವಾದ ಯಾವತ್ತೂ ನಡವಳಿಕೆಯ ಪರಂಪರೆಯೂ, ಇನ್ನೊಬ್ಬನು 'ಇಲ್ಲ'ವೆಂದು ಅಳುತ್ತಿದ್ದರೂ, ಇದ್ದುದನ್ನು ಬಗರಿಕೂಡಿಡಬಹುದೆಂಬ ಶೀಲವನ್ನು ಬೆಳೆಯಿಸಿ, ಕರ್ಮಫಲದ ನೆಪದಿಂದಲೋ, ರಾಜಕೀಯ ಶಾಸನಗಳ ಬಲದಿಂದಲೋ, ಕಟ್ಟಳೆಗಳಿಂದಲೋ ಕಾಯ್ದುಬಂದ ಪರಂಪರೆಗಳು, ಕಳವಿನ ಪರಿಸ್ಥಿತಿಯನ್ನೂ, ಆತ ಹಸಿಯಬೇಕಾದ ಪ್ರಸಂಗಗಳನ್ನೂ ಕಲ್ಪಿಸಿದ ಸಮಾಜವೂ ಅಪರಾಧಿಗಳಲ್ಲವೇ? ಕಳವಿಗೆ ಆರು ತಿಂಗಳ ಸಜೆಯಾದರೆ, ಸಮಾಜದ ಪಾಲು ಅದರಲ್ಲೆಷ್ಟು—ಎಂದು ಹೇಳಬಲ್ಲಿರಾ? ಸಮಾಜವು ಈ ಧನಿಕ ಬಡವರಲ್ಲಿನ ಅಂತರವನ್ನು ಪರಿಹರಿಸಲು ಏನು ಕೆಲಸ ಮಾಡಿತ್ತು?

ಈಗ ಅವನ ಕಳ್ಳತನಕ್ಕೆ ಧೈರ್ಯವಿತ್ತವರಾರೆಂದು ವಿಚಾರಿಸುವ. ಹತ್ತು ಜನರ ಬದುಕಿನಿಂದ ಒಂದನ್ನು ತೆಗೆದರೆ ತಪ್ಪಿಲ್ಲವೆಂದು ತೋರಿಸಿದವರು, ಹೆರರ ಮನೆಯ ಹೂದೋಟದಿಂದ ಹೂ ತೆಗೆದವರು, ಊರಿನ ಬಯಲಿನಲ್ಲಿ ತಾವೇನೂ ಮಾಡಬಹುದೆಂಬ ಸ್ವಾತಂತ್ರ್ಯ ತೋರಿದವರು. ಅಂಥ ಹಲವರು ಅವನ ಗುರುಗಳಲ್ಲವೇ? ಇವರೆಲ್ಲರೂ ಸೇರಿ—ವ್ಯಕ್ತಿಗೆ ಪ್ರೇರಣೆ ಕೊಡುತ್ತಾರೆ—ಕದಿಯಲು ತಕ್ಕ ಪ್ರೇರಣೆ. ಅದು ಮನಸ್ಸಿನಲ್ಲಿ ಬೆಳೆದುಬರುತ್ತದೆ. ಆಗ ಕೊನೆಯಲ್ಲಿ ಕಳವಿಗೆ ನಿಮಿತ್ತನಾದವನು ಮಾತ್ರ ಕಾರಣನೇ? ಅರಿತಾ

ಗಲಿ, ಅರಿಯದೆಯಾಗಲಿ ಅವನಿಗೆ ಉದ್ಯೋಗ ಕೊಡದವರು, ಅನ್ನ ನಿರಾಕರಿಸಿದವರು, ಅವನಿಗಿಂತ ಹೆಚ್ಚಿನ ಸುಖದಲ್ಲಿ ತೇಲುವವರು–ಎಲ್ಲರೂ ಅಪರಾಧಿಗಳಲ್ಲವೇ? ಇಂಥ ಸಾಮಾಜಿಕ ರೂಢಿಗಳಿರುವಲ್ಲಿ, ಅವರ ಕರ್ಮದ ಮರಿಯಾಗಿ ಕಳವು ಉಂಟಾಗುತ್ತದೆಯೇ ವಿನಾ, ಒಬ್ಬೊಬ್ಬನಿಂದಲೇ ಅಲ್ಲ. 'ಕಳ್ಳ' ತನವನ್ನು ನಾವು ಶಿಕ್ಷೆಯಿಂದ ದಂಡಿಸಿದರೂ, ಆ ಚಾಳಿ ಅಡಗದೆ ಇಂದಿನ ತನಕ ಉಳಿಯುವುದಕ್ಕೆ ಏನು ಕಾರಣ? ಸಮಾಜವೂ ಅದಕ್ಕೆ ಕಾರಣ. ಅದು ತನ್ನ ತಪ್ಪನ್ನು ತಾನು ತಿದ್ದದೆಯೆ, ಅನುವಂಶೀಯವಾಗಿ ಇಂಥ ಕೊರತೆಗಳನ್ನು ಕಾಯ್ದು ಬಂದಿದೆ. ವ್ಯಕ್ತಿ–ಆತ್ಮದ ಅರಿವು ಎಷ್ಟೆಷ್ಟು ಹಿಂದಾಗಿ, ಸಮಾಜ ಆತ್ಮದ ಕಲ್ಪನೆ ಎಷ್ಟೆಷ್ಟು ಮುಂದುವರಿಯುತ್ತದೋ ಅಷ್ಟಷ್ಟು ಹಿತ ನಮ್ಮ ಜೀವನಕ್ಕೆ. ಆಗ ಮಾತ್ರ–ನಮ್ಮಲ್ಲಿ ಉಂಟಾಗುತ್ತಿರುವ ಅನೇಕ ನೋವು, ನರಳುವಿಕೆಗಳ ಅರ್ಥ ನಮಗೆ ತಿಳಿದೀತು. ಬಡವನಾದವನು ತನ್ನ ಕರ್ಮದಿಂದ ಹಾಗಾದನು, ಮಗು ಹುಟ್ಟಿದಾಗಲೇ ಶ್ರೀಮಂತರ ಮನೆಯಲ್ಲಿ ಹುಟ್ಟಿದರೆ, ಅದು ಪುಣ್ಯಮಾಡಿದ ಜೀವ ಎಂದ ತಿಳಿಯುವ ಮನೋಭಾವ ತಪ್ಪು

**ಕೊರತೆಗಳ ಬುಡ**

ಇಂದು ನಮ್ಮ ಸಮಾಜಗಳಲ್ಲಿ ತುಂಬಿರುವ ಅನೇಕಾನೇಕ ಕೆಡುಕು—ಒಳಿತುಗಳ ಬುಡವನ್ನು ನಾವು ಪರಿಶೀಲಿಸಬೇಕು. ಇವು ಒಬ್ಬೊಬ್ಬನ ಪಾಲಿಗೇನೆ ಹಂಚಿಹೋಗಬಲ್ಲ ಕ್ರಿಯೆಗಳಾಗಿ ಕಾಣಿಸುವುದಿಲ್ಲ. ಜನರಲ್ಲಿ ಕಂಡುಬರುವ ಅನೇಕ ರೀತಿಯ ತಾರತಮ್ಯಗಳಾದರೂ ಹಾಗೇನೆ. ಬಡತನ ಸಿರಿವಂತಿಕೆಗಳಿಂದ ಉಂಟಾಗುತ್ತಿರುವ ಬವಣೆಗಳು, ಪ್ರೇಮ ಕಾಮಗಳಿಂದ ಸಮಾಜವನ್ನು ಕಾಡುವ ಕ್ಲೇಶ, ಈರ್ಷೆ, ಹಿಗ್ಗುಗಳು; ಬೇನೆ, ರೋಗ, ರುಜೆ, ಆ ಜನ್ಮರೋಗ–ಮೊದಲಾದ ಯಾವುದೇ ಅಂಶವನ್ನು ಇಣಿಕಿನೋಡಿದರೂ, ನಮಗೆ ಮನುಷ್ಯ ಕುಟುಂಬದ ಸಮಷ್ಟಿ ಹೊಣೆಗಾರಿಕೆಯೇ ಕಾಣಿಸಬೇಕು. ಒಂದು ಜನಾಂಗವು ಇನ್ನೊಂದನ್ನು ನೋಡುವ ದೃಷ್ಟಿ, ಒಂದು ಗುಂಪು ಇನ್ನೊಂದನ್ನು ನೋಡುವ ದೃಷ್ಟಿ, ವ್ಯಕ್ತಿ ಸಮಾಜವನ್ನು ನೋಡುವ ದೃಷ್ಟಿ, ಇವಕ್ಕೆಲ್ಲ ಕಾರಣವಾಗಿವೆ, ನೀತಿ ಅನೀತಿಗಳು, ಪಾಪ ಪುಣ್ಯಗಳು, ರೋಗ ರುಜೆಗಳು—ಈ ಎಲ್ಲ ಸಾಮೂಹಿಕ ಕ್ರಿಯೆಗಳೂ, ನಂಬಿಕೆ, ಆಚರಣೆ, ಜ್ಞಾನ, ಅಜ್ಞಾನ–ಇವುಗಳ ಫಲಶ್ರುತಿಗಳು. ಅವುಗಳ ಒಟ್ಟು ಫಲ ಇಂದಿನ ಸಮಾಜದಲ್ಲಿ ಕಾಣಿಸುವ ಸುಖದು:ಖ, ಏರು ತಗ್ಗು

ಗಳಿಗೆ ಕಾರಣ. ವ್ಯಕ್ತಿಗಳ ಕೈವಾಡ ಇದರಲ್ಲಿ ಇಲ್ಲವೇ ಇಲ್ಲ-ಎಂದಲ್ಲ, ಆದರೆ ಒಬ್ಬೊಬ್ಬ ವ್ಯಕ್ತಿಯ ನಡತೆಯೂ ಅವನ ಗುಂಪಿನ ಪ್ರಭಾವಕ್ಕೆ ಅಧೀನವಾದುದು. ಆದುದರಿಂದ—ಮುಂದಿನ ಯುಗವು ಸುಖಕರವಾಗ ಬೇಕು, ಜಗತ್ತು ಪುಣ್ಯದ ಹಾದಿಯಲ್ಲಿ ಸರಿಯಬೇಕು – ಎನ್ನುವವರು, ಈ ವ್ಯಕ್ತಿಯ ಮೇಲೆ ಅವನ 'ಮೂಲಕ' ಆಗುವ ಯಾವತ್ತು ಕರ್ಮಗಳ ಹೊರೆ ಯನ್ನು ಹೊರಿಸಿ, ಅದರ ಚಿಕಿತ್ಸೆಯನ್ನು ಮಾಡಹೋದರೆ, ಅದು ಸಾಧಿಸ ಲಾರದು. ಅವನು ಒಂಟಿಯಲ್ಲ. ಅವನ ನೀತಿಯನ್ನು ರೂಪಿಸುವ ಸುತ್ತಲಿನ ಆವರಣ, ಅದಕ್ಕೆ ಈಗಾಗಲೇ ದಿಕ್ಕು ತೋರಿದ ಹಿಂದಿನ ಪರಂಪರೆ-ಇವುಗಳ ಕರ್ಮಗತಿಯನ್ನೂ ನಾವು ತಿದ್ದಬೇಕು. ಇಂದಿನ ಸಮಾಜವು ತನ್ನ ಒಟ್ಟಿನ ಹೊಣೆಯನ್ನು ತಿಳಿಯಲು ಪ್ರಯತ್ನಿಸಿ, ಮುಂದಿನ ಕ್ರಾಂತಿಯನ್ನು ಹುಟ್ಟಿ ಸಲು ಶಕ್ತವಾದರೆ, ನಾಳಿನ ಬಾಳು ಇಂದಿಗಿಂತ ಹಸನಾದೀತು.

ವ್ಯಕ್ತಿಯು ಎಂತಹ ಸದುದ್ದೇಶಪ್ರೇರಿತನಾಗಿದ್ದರೂ ತಾನು ಬೇರೆ, ತನ್ನ ಜೀವನ ಬೇರೆ- ಎಂದು ಅರಿತು ವ್ಯವಹರಿಸುವಷ್ಟು ಕಾಲ, ಸ್ವಾರ್ಥದ ಬಲೆಗೆ ಬೀಳುತ್ತಾನೆ. ಉಳಿದವರ ಕಡೆಗೆ ತನಗಿರವ ಹೊಣೆಯನ್ನು ತಪ್ಪಿಸಿ ಕೊಳ್ಳುತ್ತಾನೆ. ಇಂಥ ನಂಬಿಕೆಯ ವರ್ಚಸ್ಸಿನಿಂದ, ತನಗೆ ತಿಳಿಯದಂತೆ ಇನ್ನೂ ಅನೇಕ ಕೆಡುಕಿನ ಪರಂಪರೆಗಳನ್ನು ಬಿತ್ತುತ್ತಾನೆ.

**ದೆವ್ವದಂತಹ ಕೂಸು**

ಕ್ರಿಸ್ತೀಯರ ಆತ್ಮವನ್ನುಳಿಸಹೋದವರು ಉಳಿದ ಜನಾಂಗಗಳಿಗೆ ಹಾನಿಯೆಸಗಿದರು. ಮುಸಲ್ಮಾನ ಮತಪ್ರಸಾರಕರು ವಿರುದ್ಧ ಮತಗಳನ್ನು ತುಳಿದು ಸಾಗಿದರು. ಹಿಂದೂ ಮತದ ಅನೇಕ ಒಳ ಪಂಗಡಗಳ ಅಸಹಿಷ್ಣು ತೆಯು ಇರದಂತೆಯೇ ಬೆಳೆಯಿತು. ಜಾತಿ, ಗುಂಪು, ವರ್ಣಗಳೆಂಬ-ಅನೇಕ ಉಗ್ರ ಬೇನೆಗಳು, ವ್ಯಕ್ತಿ 'ಆತ್ಮ'ದ ಸಂಕುಚಿತ ಭಾವನೆಗಳು ಹೆತ್ತಂತಹ ದೆವ್ವದಂಥ ಕೂಸುಗಳು.

**ಹಲವು ಆತ್ಮಗಳು**

ಈಗ ವ್ಯಕ್ತಿಯ 'ಆತ್ಮ'ದ ಬೇರೆಬೇರೆ ಕಲ್ಪನೆಗಳನ್ನು ಪರಿಶೀಲಿಸುವು ದೊಳಿತು. ಇವು ನಮ್ಮ ನಂಬಿಕೆ, ಶ್ರದ್ಧೆಗಳು ಮೇಲೆಯೇ ಹೊಂದಿವೆ. ಬಹುಕಾಲ ಕ್ರಿಸ್ತೀಯರು 'ಸ್ತ್ರೀ'ಯರಿಗೆ ಆತ್ಮವಿಲ್ಲ ಎಂದು ತಿಳಿದುಕೊಂಡಿ ದ್ದರು. ಇನ್ನಾದರೂ ಅಂಥ ಜನವರ್ಗ ಪ್ರಪಂಚದಲ್ಲಿ ಇದ್ದೇ ಇದೆ. ಕೆಲ

ವೊಂದು ಧರ್ಮದವರು 'ಒಬ್ಬನಿಗೆ ಒಂದೊಂದು ಆತ್ಮ' ಇದೆಯೆಂಬುದಾಗಿ ತಿಳಿಯುತ್ತಾರೆ. ಒಂದು ಜೀವಿಗೆ–ಎರಡು ಆತ್ಮ, ಮೂರು ಆತ್ಮ, ನಾಲ್ಕರಿಂದ ಏಳು ಆತ್ಮಗಳ ತನಕವೂ ಇರುವುವೆಂಬ ಕಲ್ಪನೆಯುಳ್ಳ ಜನರಿದ್ದಾರೆ. ಇಂಥ ಆತ್ಮಗಳಿಗೆ ಬೇರೆಯಾದ ಕೆಲಸ ಕಲ್ಪಿಸಿ, ಅವು ಬೇಕಾದಂತೆ ಶರೀರದಿಂದ ಹೊರಟುಹೋಗುವ, ಬರುವ ಚಿತ್ರಗಳನ್ನು ಕಲ್ಪಿಸಿದ್ದಾರೆ. ಇವರಲ್ಲಿ ಯಾರು ಚತುರರು? ಈ ವಿಷಯವಾಗಿ ಉಂಟಾದ ಅನೇಕ ಕತೆ, ಪುರಾಣ, ನಂಬಿಕೆ ಗಳನ್ನು ಪರಿಶೀಲಿಸುವಲ್ಲಿ—ಮನುಷ್ಯನ ಮಹಾಪ್ರಪಂಚವೇ ಇಂಥ ಕಲ್ಪನೆ ಗಳನ್ನು ಹುಟ್ಟಿಸಿದಂತೆ ಕಾಣುತ್ತದೆ.

ಜನತೆಯ ನಂಬಿಕೆಯ ವಿಚಾರದಲ್ಲಿ, ಮೇಲಿನ ಒಂದು ಸಂಗತಿಯನ್ನು ಹೇಳಿ, ತಿರುಗಿ ಮೊದಲಿನ ವಿಷಯವನ್ನು ಗಮನಿಸುವ. ಈ ಅಧ್ಯಾಯದಲ್ಲಿ ಮನುಷ್ಯನ ಕರ್ಮ ಮತ್ತು ಕರ್ಮಫಲವನ್ನು ಎಣಿಸುತ್ತ, ಒಟ್ಟು ಮಾನವೀ ಸಮಾಜವನ್ನು ಕುರಿತು ಹೇಳಿದ್ದಾಯಿತು. ಈ ಮಾನವೀ ಸಮಾಜವೇ ಒಂದು ಅಖಂಡ ಶರೀರವೆಂದು ತರ್ಕಿಸಿದ್ದಾಯಿತು. ಈ ವಿಚಾರ ಸರಣಿಯು ಸತ್ಯದ ಒಂದು ಸೆರಗು ಮಾತ್ರವಾಗಿದೆ. ಮನುಷ್ಯನ ಸಂಸ್ಕೃತಿ, ನಂಬಿಕೆ, ನೀತಿ ಅನೀತಿಗಳ ಕಲ್ಪನೆಯ ಕಾರಣಗಳನ್ನು ಕುರಿತು ತರ್ಕಿಸಲು ಸಹಾಯವಾಗಲು ಹೇಳಿದ ಮಾತುಗಳಿವು. ಆದರೆ ಈ ಮನುಷ್ಯ ಪರಂಪರೆಯೂ, ತೀರ ಸ್ವತಂತ್ರ ವಾದದ್ದಲ್ಲ. ಪ್ರಪಂಚದ ಜೀವಕೋಟಿಗಳೊಡನೆ ಅದರ ಸಂಬಂಧವಿದೆ. ಮನುಷ್ಯ ಇಂದು ತನ್ನ ಅನ್ನಾಹಾರಗಳ ಮಟ್ಟಿಗೆ ಮಾತ್ರ ಅವುಗಳ ಮೇಲೆ ಹೊಂದಿರುವನೆಂದು ತಿಳಿಯಬಾರದು. ಅದಕ್ಕೂ ಮೀರಿದ ಹೊಂದಿಕೆ ಉಳಿದ ಜೀವಗಳಿಗೂ ಅವನಿಗೂ ಇದೆ.

ಮನುಷ್ಯನ ರೂಪದ ವಿಕಸನವನ್ನು ಕುರಿತು ಡಾರ್ವಿನ್‌ನಂಥವರ ಸಿದ್ಧಾಂತಗೊಳಿಸಿದ ತತ್ವಗಳನ್ನು ಎಣಿಸಿಕೊಳ್ಳುವ. ಆಗ ನಮಗೆ, ನಮ್ಮ ಮಾನವ ಕುಲ–ಹೇಗೆ ಏಕಕಣ (Uni-cellular) ಜೀವಿಯಿಂದ ತೊಡಗಿ ತೆಂದೂ, ಅದೇನೆ ಮುಂದೆ ಕ್ರಮೇಣ ಬಹುಕಣ ಜೀವಿಗಳ ವಿಕಾಸಕ್ಕೆ ಕಾರಣವಾಗಿ, ಅನಂತರ ಕಪಿ, ಕಪಿ ಮನುಷ್ಯ, ಮನುಷ್ಯರಲ್ಲಿ ಪರಿಣಮಿಸಿ ತೆಂದೂ ತಿಳಿದುಬರುತ್ತದೆ. ಜೀವಿಗಳ ಮನಸ್ಸು, ಶೀಲ, ಸ್ವಭಾವ, ಹುಟ್ಟು ಗುಣ–ಇವುಗಳೆಲ್ಲ ಎಷ್ಟು ಅನ್ಯೋನ್ಯ ಬೆರಕೆಗೊಂಡು ಬೆಳೆದಿವೆಯೆಂಬುದು ತಿಳಿಯುತ್ತದೆ.

## ಮಾನವನ ಹಿರಿತನ

ಮನುಷ್ಯನನ್ನು ನಾವು 'ಉನ್ನತ'ಮಟ್ಟದಲ್ಲಿರಿಸಿ, ತಾತ್ವಿಕ ವಿವೇಚನೆಯನ್ನು ಮಾಡುತ್ತೇವಾದರೂ, ಅವನ ಶಾರೀರಿಕ, ಮಾನಸಿಕಗಳಾದ ಅನೇಕ ನಡತೆಗಳಲ್ಲಿ 'ಪ್ರಾಣಿ'ತನ ನಲಿದಾಡುತ್ತಿದೆ. ಈ ಪ್ರಾಣಿತನದ ಮಿತಿ, ವಿಸ್ತಾರ, ಉದ್ದೇಶಗಳನ್ನು ತಿಳಿಯದೆಯೆ ಮನುಷ್ಯನ ಇತಿಮಿತಿಗಳನ್ನು ತಿಳಿಯಲಾರೆವು. ಮನುಷ್ಯನು ಜೀವವೃಕ್ಷದ ತುತ್ತುದಿಯಲ್ಲಿರುವ ಮಾತ್ರದಿಂದ, ಅವನೇ 'ಜೀವನ'ದ ಕೊನೆಯ ತೀರ್ಮಾನ, ಅವನೇ ಅದರ ಪಕ್ವಫಲ–ಎಂದು ತಿಳಿಯಬೇಕಾದ ಕಾರಣವಿಲ್ಲವಲ್ಲ. ಯಾವತ್ತೂ ಬದುಕೇ ಸಾಗಬೇಕಾದ ಗುರಿಯು ಈ ತೆರನ ಮನುಷ್ಯನೆಂದಾಗಲಿ, ಮನುಷ್ಯನು ಮಾತ್ರ ಜೀವನದ ಗುರಿಯನ್ನು ಸಾಧಿಸಲು ಉಚ್ಚ ಜನ್ಮಗ್ರಹಣ ಮಾಡಿದವನು ಎಂದಾಗಲಿ ತಿಳಿಯಲು ಕಾರಣವಿಲ್ಲ. ಗಿಡವೊಂದು ಬೆಳೆದು, ಹೂವಾಗಿ 'ಮಿಡಿಬಿಟ್ಟು' ಹಣ್ಣಾಯಿತೆಂದರೆ–ಆ "ಹಣ್ಣೇ" ಗಿಡದ 'ಅರ್ಥ' ಎಂದು ತಿಳಿಯುವುದು ಮೂರ್ಖತನವಲ್ಲವೇ? ಅವುಗಳ ಬದುಕಿನ ಅಂತರಂಗ ನಮಗೇನು ತಿಳಿದಿದೆ? ಬದುಕೆಲ್ಲ 'ಆತ್ಮೋದ್ಧಾರ'ಕ್ಕೆಂದು ಏನು ಸಿದ್ಧಾಂತ? ಇತರ ಜೀವಕೋಟಿಗಳಿಂದ ಆತ್ಮೋದ್ಧಾರದ ಕೆಲಸವಾಗಲಾರದೆಂದು ಯಾರು ನಿರ್ಣಯಿಸುವವರು? ಯಾವ ಬದುಕಿನ ಅರಿವು ನಮಗೆ ಸಾಕಷ್ಟು ಇಲ್ಲವೋ, ಅದರ ಗೊತ್ತು, ಗುರಿ, ಮೇಲ್ಮೆ, ಕೀಳ್ಮೆಗಳನ್ನು ತರ್ಕಿಸಲು ನಾವಾರು?

## ಹಾಸುಹೊಕ್ಕಿನ ಜೀವನ

ಮನುಷ್ಯನ ಸುಖದುಃಖ, ಹಿಗ್ಗು, ಕುಗ್ಗುಗಳು — ಗಿಡ, ಮರ, ಹಸು ಹಕ್ಕಿಗಳೊಡನೆ ಅವಿರತವಾಗಿ ಸೇರಿಕೊಂಡಿಲ್ಲವೆ! ಅಲ್ಲದೆ ನಮ್ಮ ಮನುಷ್ಯ ಕುಟುಂಬದಿಂದಾಗಿ ಆ ಜೀವಿಗಳ ಜಗತ್ತಿನಲ್ಲೂ ಹಾನಿ, ಹಿತಗಳು ಸಂಭವಿಸುತ್ತಲೇ ಇರುತ್ತವೆ. ನಮ್ಮ ಉದರ ಪೋಷಣೆಯ ವಿಚಾರದಲ್ಲೂ ಇದು ನಿಜ, ಮನಸ್ಸಿನ ಬೆಳವಣಿಗೆಯ ವಿಷಯದಲ್ಲೂ ನಿಜ. ಇದನ್ನು ಪರಿಶೀಲಿಸಿದಂತೆ — ನಮಗೆ ಒಟ್ಟು ಜೀವಕೋಟಿಯೇ ಹಾಸುಹೊಕ್ಕಾಗಿ ನೆಯ್ದ ಒಂದು ಅರಿವೆಯಂತಿದೆಯೆಂದು ಕಾಣುತ್ತದೆ. ಇತರ ಜೀವಿಗಳ ಕರ್ಮಫಲ ನಮ್ಮದರೊಡನೆಯೂ, ನಮ್ಮ ಕರ್ಮಫಲ ಅವುಗಳೊಡನೆಯೂ ಸೇರಿದೆ. ಇವುಗಳ ಒಟ್ಟು ಫಲವನ್ನು ಅವೂ ಅನುಭವಿಸುತ್ತವೆ; ನಾವೂ ಅನುಭವಿಸಬೇಕು.

ಸಮಸ್ತ ಜೀವಕೋಟಿಗಳ ಸುಖದುಃಖಗಳು ಪ್ರತ್ಯಕ್ಷವಾಗಿಯೂ

ಪರೋಕ್ಷವಾಗಿಯೂ ಒಂದರೊಡನೊಂದು ಸೇರಿಕೊಂಡಿವೆ. ಹಾಗೇನೆ ನಿನ್ನಿನ ಜೀವಕೋಟಿಯೊಡನೆ ಇಂದಿನದರ ಸುಖದುಃಖ ಸೇರಿದೆ. ಇಂದಿನದರ ಸುಖದುಃಖಗಳು ನಾಳಿನ ಜೀವಯುಗದಲ್ಲಿ ಮಿಳಿತವಾಗಿದೆ. ವ್ಯಕ್ತಿಯಾದವನು ತನ್ನ ವ್ಯಕ್ತಿತ್ವ ಇಲ್ಲವೆ 'ಆತ್ಮ'ವೆಂಬುದರ ಮಿತಿಯನ್ನು ಈ ಹಿನ್ನೆಲೆಯ ಮುಂದೆ ಹಿಡಿದೇ ತಿಳಿದುಕೊಳ್ಳಬೇಕು. ಹಾಗೆ ಮಾಡದೆಯೆ, ಅವನು ತನ್ನನ್ನು ಬೇರೆಯಾಗಿರಿಸಿಕೊಂಡು, ತಿಳಿಯಲು ಯತ್ನಿಸುತ್ತಾನಾದರೆ, ಅವನಿಗೆ ತನ್ನ ಸ್ವಭಾವದ ಸಮನಾದ ಪರಿಚಯ ದೊರೆಯಲಾರದು. ಅಂಥ ತೀರ್ಮಾನಗಳಿಂದ ಅವನು ತನ್ನ ನಡತೆಯನ್ನು, ಧ್ಯೇಯಗಳನ್ನು ರೂಪಿಸುವಲ್ಲಿ, ಅವನ ಆದರ್ಶಗಳು, ರೀತಿಗಳು, ಕೇವಲ ಅವನ ಸುಖವನ್ನು ಸಾಧಿಸಿಕೊಡುವಂತೆ ಕಾಣಬಹುದಾದರೂ, ಅದು ಜೀವಕುಟುಂಬದ ಒಟ್ಟು ಹಿತಕ್ಕೆ ಕಾರಣವಾಗಲಾರದು.



# ೮. ಜೀವನದ ಹಾದಿಯಲ್ಲಿ ಅಭಿವೃದ್ಧಿಗೆ ಕಾರಣರು

**ವ್ಯಕ್ತಿಯ ವೈಶಿಷ್ಟ್ಯ**

ವ್ಯಕ್ತಿಯಾದವನು ಹೇಗೆ ಒಟ್ಟು ಜೀವನದಲ್ಲಿ ಬೆರೆತಂಥ ವಸ್ತು ಎಂದು ಹಿಂದೆ ಹೇಳಿದುದಾಯಿತು. ಹಾಗಿರಲು 'ವ್ಯಕ್ತಿ' ತಾತ್ಕಾಲಿಕವಾಗಿಯಾದರೂ ಬೇರೆಯೇ ಆಗಿ ಕಾಣಿಸುವುದರಿಂದ ಏನಾದರೂ ಹಾನಿ, ಲಾಭಗಳಿವೆಯೇ? ಒಂದು ವ್ಯಕ್ತಿಯಿಂದ ಒಟ್ಟು ಜೀವಕೂಟಕ್ಕೆ ಹಿತವಾಗಬಲ್ಲುದೇ? ಈ ಜೀವ ಕೋಟಿಯ, ಅದರಲ್ಲೂ ನಮಗೆ ಪರಿಚಿತವಾದ ಮಾನವ ಸಮುದಾಯ ಅಭಿವೃದ್ಧಿಗೊಂಡಂತೆ ಕಾಣುತ್ತಿದೆಯೋ, ಹೇಗೆ-ಎಂಬೆಲ್ಲ ತರ್ಕಗಳನ್ನು ನಾವು ಇದಿರಿಸಬೇಕು. ನಮ್ಮಲ್ಲುಂಟಾಗುವ ಪ್ರಗತಿಗಾಗಲಿ, ಅವನತಿಗಾಗಲಿ– ಎಂಥವರು ಕಾರಣರು ಎಂಬುದನ್ನು ನಿರೀಕ್ಷಿಸಿದರೆ ಆಗ ವ್ಯಕ್ತಿಜೀವನದ ವೈಶಿಷ್ಟ್ಯ ತಿಳಿದೀತು.

ವ್ಯಕ್ತಿಯಾದವನು ತನ್ನ ಗುಂಪಿನ ಸ್ವಭಾವ, ಶೀಲ ಮೊದಲಾದುವುಗಳ ವರ್ಚಸ್ಸಿಗೆ ಸಿಲುಕಿಕೊಂಡೇ ಹುಟ್ಟುತ್ತಾನೆ. ಅವನ ಬೆಳವಣಿಗೆಯು ಬಹು ವಾಗಿ ಅವುಗಳು ಹಿಡಿತಕ್ಕೊಳಗಾಗಿಯೇ ಸಾಗುತ್ತಿರುತ್ತದೆ. ಆದರೂ ಪ್ರತಿ ಯೊಂದು ಜೀವಿಯಲ್ಲೂ, ಒಂದು ಬಗೆಯ 'ತನ್ನತನ'ವನ್ನು ಕಾಣುತ್ತೇವೆ. ಇದು ಅಷ್ಟೊಂದು ತೀರ ಪರತಂತ್ರವಾದ ಶಕ್ತಿಯೂ ಅಲ್ಲ. ಅದಕ್ಕೆ ಕೆಲ ವೊಂದು ರೀತಿಗಳಲ್ಲಿ ಸ್ವತಂತ್ರವಾಗಿ ವರ್ತಿಸುವ, ವಿಚಾರ ಮಾಡುವ ಶಕ್ತಿ ಗಳುಂಟು. ಎಲ್ಲ ಜನರೂ, ಎಲ್ಲ ಜೀವಿಗಳೂ ಹೀಗೆ ಮಾಡುತ್ತಾರೆಯೇ– ಎಂದು ಕೇಳಿದರೆ, ಬಹುಜೀವಿಗಳು ಪರಂಪರೆಯ ಪ್ರವಾಹದಲ್ಲಿ ವ್ಯಕ್ತಿತ್ವ ಮರೆತೇ ತೇಲಿಹೋಗುತ್ತವೆ—ಎನ್ನಬೇಕು. ಆದರೂ ಒಂದು ಜೀವಿಯು ತನ್ನ ಆವರಣಕ್ಕೆ ಒಡ್ಡುವ ಮನೋಭಾವವು ಇನ್ನೊಂದರಂತಿರುವುದಿಲ್ಲ. ಒಂದೇ ಪರಿಸ್ಥಿತಿಯನ್ನು ಎರಡು ಜೀವಿಗಳು ಬೇರೆಬೇರೆಯಾಗಿ ಇದಿರಿಸುವು ದನ್ನೂ ಕಾಣುತ್ತೇವೆ. ಇದಕ್ಕೆಲ್ಲ ವ್ಯಕ್ತಿಯಲ್ಲಿ ಕೇಂದ್ರಿಸಿದ 'ತನ್ನತನ' ಕಾರಣ ವಾಗಿ ಎದ್ದು ಕಾಣುತ್ತದೆ. ಇವನು ಇತರರಂತಲ್ಲ ಎಂಬ ಹಿರಿಮೆ ಅವನಲ್ಲಿ ವ್ಯಕ್ತವಾಗುತ್ತದೆ. ಅಂತಹ ಹಿರಿಯ ವ್ಯಕ್ತಿಗಳೂ ಗುಂಪಿನ ಅಂಶಗಳೇ. ಅದರಂತೆ, ಸಾಮಾನ್ಯಕ್ಕೂ ಕಡಿಮೆತೆರನ ಜೀವಿಗಳೂ, ಜನರೂ ಇರಬಹುದು.

ಅವರೂ ಆ ಗುಂಪಿಗೆ ಸೇರಿದವರೇ. ಒಟ್ಟು ಜೀವನ ಪ್ರವಾಹದ ಕೀಳ್ಮೆಗೋ, ಮೇಲ್ಮೆಗೋ ಈ ಎಲ್ಲರು ಕಾರಣರಾಗುತ್ತಾರೆ. ಜನಸಾಮಾನ್ಯರಂತೆ ಕೆಲವರು ಇರದೆ, ತಮ್ಮದೇ ಆದೊಂದು ರೀತಿಯಲ್ಲಿ ವರ್ತಿಸುತ್ತಾರೆ. ಅವರ ಅಂಥ ನಡತೆ ಮುಂದಿನ ಜೀವನದ ಅಂಶವಾಗುವುದರಿಂದ, ನಾಳಿನ ಜೀವನ ಪ್ರವಾಹದ ಶ್ರೇಯಸ್ಸು, ಅವನತಿಗಳು ಅಂತಹ ವಿಶೇಷ ವ್ಯಕ್ತಿಗಳಿಂದಾಗ ಬಹುದು.

### ಮೀನು-ಮೊಸಳೆ-ಉಡ

ಮೊದಲಿನ ಜಲಚರ ಜೀವಿಗಳೇ, ಗೌಳಿಯಂತಹ ಭೂಚರ ಜೀವಿಗಳಾ ದುವೆಂಬುದಾಗಿ ಕೇಳುತ್ತೇವೆ. ಹೇಗೆ ಇದು ಸಾಧ್ಯವಾಗಿರಬಹುದು? ನೀರು ಆರಿದಾಗ, ನೆಲವು ನೀರಲ್ಲಿ ಮೂಡಿದಾಗ, ಈ ಹೊಸ ಆವರಣದದಲ್ಲಿ ಬದುಕಲಾರದೆ ಮಡಿದ ಪ್ರಾಣಿಗಳ ಸಂಖ್ಯೆ ಅನೇಕವಾಗಿದ್ದಿರಬಹುದು. ಆದರೆ ಅವುಗಳಲ್ಲಿ ಕೆಲವು ಪ್ರಾಣಿಗಳು ಹಟಹಿಡಿದು ನೆಲದಮೇಲೆ ಬಂದು, ಜೀವಿಸಲು ಪ್ರಯತ್ನಿಸಿದವು. ಮೊದಮೊದಲಿಗೆ ಅವುಗಳ ಯತ್ನಸಫಲವಾಗದೆ ಹೋದರೂ, ಕಾಲಕ್ರಮೇಣ ಅಂಥ ಯತ್ನಗಳು ಸಾಧ್ಯವಾಗಿ, ಮೀನಿನಂಥ ಜಲಚರ ಜೀವಿಯು ಮೊಸಳೆಯಂತಹ ನೆಲಜಲಗಳಲ್ಲಿ ಬದುಕಬಲ್ಲ ಜೀವಿ ಯಾಯಿತು. ಮುಂದೆ 'ಉಡ'ದಂತೆ ಅದು ಕೇವಲ ನೆಲದ ಮೇಲೆಯೇ ಜೀವಿಸುವುದಕ್ಕೂ ಸಾಧ್ಯವಾಯಿತು.

ಮಾನವನ ಸಂಸ್ಕೃತಿಯಾಗಲಿ, ಶೀಲವಾಗಲಿ—ಹೇಗೆ ಈಗಣ ಅಭಿ ವೃದ್ಧಿಯನ್ನು ಪಡೆದುವು? ಮನುಷ್ಯನು ಗವಿಮನುಷ್ಯನ ಮಟ್ಟದಿಂದ ಇಂದಿನ ನಾಗರಿಕತೆಯನ್ನು ಹೇಗೆ ಕಂಡುಹಿಡಿದ? ವಿಜ್ಞಾನವಾಗಲಿ, ತತ್ವಜ್ಞಾನವಾಗಲಿ ಇಂದಿನ ಬದುಕಿಗೆ ದೊರೆತ ಬಗೆ ಹೇಗೆ? ಅನೇಕ ವ್ಯಕ್ತಿಗಳ ಸಾಹಸ, ತಪಸ್ಸು, ಚಿಂತನೆ, ನಡವಳಿಕೆಗಳ ಫಲವಾಗಿಯೇ ಅವು ಉಂಟಾದುವು— ಎಂಬ ಉತ್ತರವನ್ನು ಕೊಡಬೇಕಾಗುತ್ತದೆ.

### ಇತಿಹಾಸದಿಂದ

ಮಾನವ ಜೀವನದ ಪ್ರಗತಿಗೆ ಕಾರಣವಾದ ಅಸಂಖ್ಯ ಘಟನೆಗಳ ಇತಿಹಾಸವನ್ನು ನಾವು ವಿಚಾರಿಸಿ ತಿಳಿಯಬೇಕು. ಪರಂಪರೆಯ ನಡತೆ ಮುನ್ನಡೆಗೆ ತಡೆಯಾಗಿ ಬಂದಾಗಲೆಲ್ಲ, ಕೆಲವು ಮೇಧಾವಿಗಳೂ ಧೀರರೂ, ಜನಕ್ಕೆ ಬೇರೆಯೇ ಆದ ಹಾದಿಯನ್ನು ಹಾಕಿಕೊಟ್ಟರು. ಗುಂಪಿನ ನಿಷ್ಠುರ

ಸಹಿಸಿಯಾದರೂ ಹೊಸ ಹಾದಿಗಳನ್ನು ತೋರಿಸಿಕೊಟ್ಟರು. ಎಲ್ಲ ಕಾಲಗಳಲ್ಲೂ, ಎಲ್ಲ ದೇಶಗಳಲ್ಲೂ ಇಂಥವರು ಕಾಣಿಸಿಕೊಂಡಿದ್ದಾರೆ; ಕಾಣಿಸಿಕೊಳ್ಳುತ್ತಲಿದ್ದಾರೆ. ಅವರಲ್ಲಿ 'ಎರಿಸ್ಟಾಟಲ'ನಿಗೆ ಮರಣದಂಡನೆ ವಿಧಿಸಿದಂತೆ, ಅಂಥವರನ್ನು ಬಲಿಕೊಟ್ಟ ಜನಸಮುದಾಯಗಳೂ ಇವೆ. ಆದರೆ ಅಂಥ ದಂಡನೆಗಳಿಂದ, ವ್ಯಕ್ತಿಜೀವನದ ಹೆಚ್ಚಳವನ್ನು ಸಾರಿದಂತಾಗಿ, ಅವರು ಸಾರಿದ ತತ್ವಗಳು ಉಳಿದುಕೊಂಡು, ಮುಂದಿನ ಜನರ ಮನ್ನಣೆಗೆ ಪಾತ್ರವಾದುವು.

**ಗಾಂಧಿ, ಹಿಟ್ಲರ್**

ಸಂಯುಕ್ತ ಅಮೇರಿಕದಲ್ಲಿ ಶ್ವೇತನೊಬ್ಬನು ನಿಂತು, ತನ್ನ ಜನರಿಗೆ 'ನಿಗ್ರೋ ಜನರನ್ನು ಗುಲಾಮರಾಗಿ ತಿಳಿಯದಿರಿ, ಅವರು ನಮಗೆ ಸರಿಸಮಾನರು' ಎಂದಿದ್ದ. ಗಾಂಧಿಜೀಯವರು ಹರಿಜನರ ವಿಷಯದಲ್ಲಿ ಇದೇ ಬಗೆಯ ಮಾತನ್ನು ಹಿಂದೂಗಳಿಗೆ ನುಡಿದರು. ಮನುಷ್ಯ ಮನುಷ್ಯನನ್ನು ಸ್ವಾರ್ಥಕ್ಕಾಗಿ ಹಿಂಸಿಸುತ್ತಿದ್ದ ವೇಳೆಯಲ್ಲಿ, ಬುದ್ಧನಂಥವರು ಹಿಂಸೆಯ ಬಗೆಯನ್ನು ಹಳಿದು, ಸಮಾಜವು ಸಮರಕ್ಕೆ ಕೊಟ್ಟ ಮನ್ನಣೆಯನ್ನು ತಗ್ಗಿಸಿದರು. ಧನಸತ್ತೆಯಿಂದ ಶ್ರೀಮಂತರು ಬಡವರ ದುಃಖಗಳಿಗೆ ಕಾರಣವಾದಾಗ ಕಾರ್ಲ ಮಾರ್ಕ್ಸನಂಥವರು ಸಮತಾವಾದವನ್ನು ಸಾರಿದರು. ಇಂಥ ಜನರೆಲ್ಲ ತಮ್ಮ ವ್ಯಕ್ತಿತ್ವವನ್ನು ಬೆಳೆಯಿಸಿಕೊಂಡುದರಿಂದ, ಗುಂಪು ತಪ್ಪು ಹಾದಿ ಹಿಡಿದಾಗ, ಅದಕ್ಕೆ ಮುಂದಿನ ಅಭಿವೃದ್ಧಿಯ ಮಾರ್ಗವನ್ನು ತೋರಿಸಿಕೊಟ್ಟರು. ಹಾಗೇನೆ—ತೈಮೂರು, ನೆಪೋಲಿಯನ್, ಹಿಟ್ಲರರಂತವರು ಜನಜೀವನವನ್ನು ತಮ್ಮ ತಪ್ಪು ಧ್ಯೇಯಗಳಿಂದ ಅವನತಿಗೆ ಇಳಿಸಿದುದೂ ಇದೆ.

ಮನುಷ್ಯನ ನಡವಳಿಕೆಗೆ ಮೂಲವಾದ್ದು—ಅವನ ವಿಚಾರ ಸರಣಿ. ಈ ವಿಚಾರ ಸರಣಿಯನ್ನು ಇನ್ನಷ್ಟು ವಿಶಾಲಗೊಳಿಸಲು ಎಷ್ಟೆಲ್ಲ ತತ್ವಜ್ಞಾನಿಗಳು ಪ್ರಯತ್ನಿಸಿಲ್ಲ! ಅದರಂತೆ ಮನುಷ್ಯನ ಆರೋಗ್ಯವನ್ನು ಅಪಹರಿಸುತ್ತಿದ್ದ—ಬೇನೆ, ಬಡಗಾಲಗಳನ್ನು ತಮ್ಮ ತಿಳಿವಳಿಕೆಗಳಿಂದ, ವ್ಯಕ್ತಿತ್ವದ ಸಾಹಸಗಳಿಂದ ಪ್ರತಿಭಟಿಸಲು ಎಷ್ಟು ಜನ ನೆರವಾಗಿಲ್ಲ! ರೋನಾಲ್ಡ್ ರಾಸ್, ಲೂಯಿ ಪೇಶ್ಚರ್, ಮೆಡಾಮ್ ಕ್ಯೂರಿಯರಂಥ ಹಲವರು ತಮ್ಮ ವ್ಯಕ್ತಿತ್ವದ ಬೆಳವಣಿಗೆಯಿಂದ ಮಾನವತೆಯ ಕಲ್ಯಾಣವನ್ನು ಸಾಧಿಸಲಿಲ್ಲವೇ? ಅದರಂತೆ—

ಮಾದಕ ದ್ರವ್ಯಗಳಿಂದಲೋ, ಇನ್ನಾವುದೇ ಯಂತ್ರ ಶೋಧನೆಗಳಿಂದಲೋ, ಜೀವನದ ಪ್ರಗತಿಗೆ ವಿಘಾತಕರಾಗಿ ಬಂದ ವ್ಯಕ್ತಿಗಳೂ ಇದ್ದಾರೆ. ಒಟ್ಟಂದ ನೋಡಿದಲ್ಲಿ ಮಾನವನ ಇತಿಹಾಸದಲ್ಲಿ—ಅನೇಕ ದುಷ್ಟ ನಡವಳಿಕೆಗಳು, ಭಾವನೆಗಳು ತುಂಬಿವೆಯಾದರೂ, ಮನುಷ್ಯ ಬಳಗ ಹಿಂದಿಗಿಂತ ಇಂದು ಎಷ್ಟೋ ಅಭಿವೃದ್ಧಿಯನ್ನು ಪಡೆದಿದೆಯೆನ್ನಬಹುದು. ಅದಕ್ಕೆಲ್ಲ ಕಾರಣ ವಾದುದು ಹಲವಾರು ವ್ಯಕ್ತಿಗಳ ಹಿರಿಮೆ.

### ವ್ಯಕ್ತಿಯ ಕರ್ತವ್ಯ

ವ್ಯಕ್ತಿ ತಾನು ಬದುಕಿ ಬಂದುದಕ್ಕೆ ಏನು ಮಾಡಲು ಶಕ್ಯ-ಎಂಬ ಪ್ರಶ್ನೆಗೆ ಇದು ಉತ್ತರವನ್ನು ಸಲಿಸುವುದಿಲ್ಲವೇ? ಬಹು ಜನರು, ಮಂದೆ ಯಲ್ಲಿನ ಕುರಿಗಳಂತೆ ಪ್ರವಾಹದಲ್ಲಿ ತೇಲಿ ಹೋಗುತ್ತಾರಾದರೂ, 'ಜೀವನ ಸಮಸ್ಯೆ'ಯನ್ನು ತಿಳಿದು ವರ್ತಿಸಬೇಕೆಂಬಾಗ, ತನ್ನ ಜೀವನದ ಸಾರ್ಥಕ್ಯವು ತಾನು ತನ್ನ ಗುಂಪಿನ ಹಿರಿಮೆಗೆ ಎಷ್ಟರ ಮಟ್ಟಿಗೆ ಕಾರಣನಾಗಬಲ್ಲೆ -ಎಂಬುದನ್ನು ತಿಳಿದು ವರ್ತಿಸುವುದರಲ್ಲಿದೆ.

ಹುಟ್ಟು ಸಾವುಗಳ ಎಡೆಯಲ್ಲಿ ಬಾಳುವಂಥ ವ್ಯಕ್ತಿ, ತನ್ನ ಬಾಳ್ವೆಯ ಕಾಲದಲ್ಲಿ ತನ್ನತನ ತೋರುವನಾದರೂ, ಆತ ಬೇರೆಯೇ ಅಲ್ಲ—ಎಂಬುದನ್ನು ಹಿಂದೆಯೇ ಹೇಳಿದ್ದಾಯಿತು. ಹೀಗಿರಲು ಆತ ತನ್ನದೆಂಬ ಬೇರೆಯೇ 'ಆತ್ಮ'ದ ಎಣಿಕೆಯನ್ನು ಹಾಕಿ ಅದರ ಕಲ್ಯಾಣಕ್ಕೆ ಹೋರಾಡುವ ಬದಲು, ಜೀವಕೋಟಿಯಲ್ಲಿ ತಾನೊಬ್ಬನೆಂದು ತಿಳಿದು ಮಾಡುವ ಪ್ರಯತ್ನ, ಮತ್ತು ವಿಚಾರಗಳಿಂದ ಹೆಚ್ಚಿನ ಸುಖವಾದೀತು. ತಾನು ಜೀವನ ಪ್ರವಾಹದಿಂದ ಬೇರೆಯೂ ಅಲ್ಲ, ಬೇರೆಯಾಗಿರಲು ಅಶಕ್ಯ, ಅದರಿಂದ ಬೇರೆಯಾದೊಂದು ಮುಕ್ತಿ ಇಲ್ಲ—ಎಂದೇ ತಿಳಿಯಬೇಕು.

ನಮ್ಮ ಜೀವನದ ಕಣಗಳಾಗಲಿ, ಭಾವನೆಗಳಾಗಲಿ ನಮ್ಮಿಂದ ಕಳಚಿ ಸಾಯುತ್ತಿರುವಾಗಲೇ, ಸುತ್ತಲಿನವರಲ್ಲಿ ಅವು ಹುಟ್ಟುತ್ತಿರುತ್ತವೆ. ಇತರರ ಕಣಗಳೂ ಭಾವನೆಗಳೂ ನಮ್ಮಲ್ಲಿ ಬೆರೆಯುತ್ತಲೇ ಇರುತ್ತವೆ. ನಮಗೆ ಬೇರೆಯೇ ಆದ ಆತ್ಮವಿಲ್ಲ ಎಂದು ತಿಳಿಯುವಂತೆಯೇ, ಹುಟ್ಟು ಸಾವುಗಳ ವಿಷಯದಲ್ಲೂ—ವಿಶಾಲ ದೃಷ್ಟಿಯನ್ನಿರಿಸಿಕೊಳ್ಳಬೇಕಾಗುತ್ತದೆ.

## ೯. ಜೀವನ ಅಮರ; ಹುಟ್ಟು, ಸಾವು ತಾತ್ಕಾಲಿಕ

### ಸಂತಾನನ ಹಿನ್ನೆಲೆ

"ಶಿಶುವೆಂಬುದು ಮಾನವನ ತಂದೆ" ಎಂಬ ಇಂಗ್ಲಿಷ್ ನಾಣ್ಣುಡಿಯು ಅಕ್ಷರಶಃ ನಿಜವಲ್ಲದೆ ಹೋದರೂ, ಜೀವನ ಮುಂದುವರಿಸುವ ಬಗೆಯನ್ನು ಅದು ತೋರಿಸುತ್ತದೆ. ಯಾವುದಾದರೊಂದು ಬಳಗದ ಒಂದು ಶಿಶುವನ್ನು ಪರಿಶೀಲಿಸಿದಲ್ಲಿ ಆ ಮಗುವಿನ ರೂಪು, ಇತರ ಕೆಲವೊಂದು ಲಕ್ಷಣಗಳು ತಂದೆಯಿಂದಲೋ ತಾಯಿಯಿಂದಲೋ ಬಂದಿರುವುದು ಕಾಣುತ್ತವೆ. ಆದರೆ ತಂದೆಯ ಇಲ್ಲವೆ ತಾಯ ಯಾವೊತ್ತು ಆಕಾರ ಲಕ್ಷಣಗಳು ಆ ಮಗುವಿನಲ್ಲಿ ಪ್ರತಿಬಿಂಬಿಸುವುದಿಲ್ಲ. ತಂದೆಯ ಮುಖ, ತಾಯಿ ಬಣ್ಣ, ಅಜ್ಜನದೋ ಮಾವನದೋ ಕಣ್ಣು, ಕಿವಿ, ಮತ್ತು ಒಬ್ಬ ದೂರದ ರಕ್ತ ಸಂಬಂಧಿಕನ ಇನ್ನಾವುದೋ ಒಂದು ಅಂಗ ಸಾಮ್ಯ—ಇವುಗಳೆಲ್ಲ ಮಗುವಿನಲ್ಲಿ ಕಾಣಿಸ ಬಹುದು. ಮಗುವಿನ ರೂಪಕ್ಕೆ ಕಾರಣರಾದವರು ಅವನ ತಂದೆ ತಾಯಿ ಗಳೆಷ್ಟು ನಿಜವೋ ಅವರ ಹಿಂದಿನ ತಲೆಮಾರಿನವರೂ ಅಷ್ಟೇ ನಿಜ. ರೂಪದ ವಿಚಾರದಲ್ಲಿ ಈ ಮಾತು ಹೇಗೆ ಅನ್ವಯಿಸುತ್ತದೋ, ಮಗುವಿನ ಗುಣ ಸ್ವಭಾವಗಳ ವಿಚಾಗಳಲ್ಲಿಯೂ ಇನ್ನಷ್ಟು ವಿಶಾಲವಾಗಿ ಅನ್ವಯಿಸುತ್ತದೆ. ಮಗುವಿನಲ್ಲಿ ಅವನ ತಂದೆಯ ಗುಣವೂ ಸೇರುತ್ತದೆ. ತಾಯಿಯ ಗುಣವೂ ಸೇರುತ್ತದೆ; ಅವನ ಹಿರಿಯರಿಂದ ಮೇಧಾವಿತನ ಬರಬಹುದು. ಇನ್ನಾವನೋ ಪೂರ್ವಜರಿಂದ ನರಗಳ ಚಟುವಟಿಕೆ ಬರಬಹುದು. ಈ ಎಲ್ಲ ಸಂಪತ್ತಿನ ಮೇಲೆ, ಆ ಮಗುವಿನ ಸುತ್ತ ಬಾಳಿ ಬದುಕುವ ಬಂಧು ಬಳಗದವರು, ಗೆಳೆಯರು, ವಿರೋಧಿಗಳು, ಸನ್ನಿವೇಶಗಳು ಪ್ರಭಾವ ಬೀರಬಹುದು.

### ಗುಣದ ಹಿನ್ನೆಲೆ

ಎಷ್ಟೋ ಬಾರಿ, ಒಂದು ತಲೆಮಾರಿನಲ್ಲಿ ಒಂದು ವ್ಯಕ್ತಿಯಲ್ಲಿ ಕಾಣಿಸಿ ಕೊಂಡ ರೂಪವಿಶೇಷ, ಅವನ ಪೀಳಿಗೆಯವರಲ್ಲಿ ಕಾಣಿಸಿಕೊಳ್ಳದೆ, ಹಲವು ವರ್ಷಗಳ ಬಳಿಕ ಆ ಬಳಗದ ಇನ್ನಾವನಾದರೂ ಒಬ್ಬನಲ್ಲಿ ಮರುಕಳಿಸ ಬಹುದು. ಒಬ್ಬನಿಗೆ ಕೋಸುಗಣ್ಣಿದೆ ಎಂದು ತಿಳಿಯುವ. ಅದು ಅವನ ಮಕ್ಕಳು ಮರಿಮಕ್ಕಳಲ್ಲಿ ಕಾಣಿಸದೆ ಹೋಗಿ, ಮುಂದಿನ ಒಂದು ಪೀಳಿಗೆ

ಯಲ್ಲಿ ಕಾಣಿಸಬಹುದು. ಅದರಂತೆ ವ್ಯಕ್ತಿಯ ಗುಣಗಳಾದರೂ, ಸಮಾಜದ ಹತ್ತು ಜನರಿಂದ ಪರಿಣಾಮಗೊಳ್ಳುವುದರಿಂದ, ಎಷ್ಟೋ ಕಾಲದ ವರೆಗೆ ಅದು ಜನಗಳಲ್ಲಿ ಕಾಣಿಸದೆ ಹೋಗಿ, ಬಹುಕಾಲದ ಬಳಿಕ ಆ ಆವರಣದಲ್ಲಿ ನೆಲೆಸಿದ್ದ ಮನೋವೃತ್ತಿಯ ಪರಿಣಾಮವಾಗಿ, ಯಾವನೋ ಒಬ್ಬನಲ್ಲಿರ ಬಹುದು. ಬುದ್ಧನಲ್ಲಿ ಕಾಣಿಸಿಕೊಂಡ ಅಹಿಂಸಾವೃತ್ತಿಯಾಗಲಿ, ಜೀವದ ಯೆಯಾಗಲಿ, ಅಷ್ಟೇ ತೀವ್ರತೆಯಿಂದ ಅವನ ಮಗ ರಾಹುನಲ್ಲಾಗಲಿ ಅವನ ಶಿಷ್ಯಕೂಟದ ಭಿಕ್ಷುಗಳಲ್ಲಾಗಲಿ ಕಾಣಿಸಲಿಲ್ಲ. ಆದರೆ ಇಂದು, ಎರಡು ಸಾವಿರ ವರ್ಷಗಳ ಬಳಿಕ, ಅದೇ ಮನೋವೃತ್ತಿಯ ಬೆಳಕು ಗಾಂಧಿಜೀಯ ವರಲ್ಲಿ ಇನ್ನಷ್ಟು ತೀವ್ರವಾಗಿ ಪ್ರಕಟವಾದುದನ್ನು ಕಾಣುತ್ತೇವೆ. ಅಂದಿನ ಬುದ್ಧನ ಮನೋಧರ್ಮ ಸಮಾಜದ ಬದುಕಾಗಿ ಹಂಚಿಹೋಗಿ, ಈ ಎರಡು ಸಾವಿರ ವರ್ಷಗಳ ತನಕ ಸಾಗಿ ಬಂದು, ಅನುಕೂಲ ಸನ್ನಿವೇಶಗಳ ದೆಸೆಯಿಂದ ತಿರುಗಿ ಗಾಂಧಿಯವರಲ್ಲಿ ಪ್ರಕಟವಾಯಿತು. ಹೀಗೆ ಪ್ರಕಟವಾದ ಮಾತ್ರದಿಂದ ಗಾಂಧಿಜೀಯವರು ಶಾಕ್ಯವಂಶಸ್ಥರಾಗಿರಬೂಬೇಕಿಲ್ಲ, ಬುದ್ಧನ ಅವತಾರವೂ ಆಗಬೇಕಿಲ್ಲ.

ನಾವು ಒಟ್ಟು ಜೀವನದ ದೃಷ್ಟಿಯಿಂದ, ಸಾವು ಹುಟ್ಟುಗಳ ಮರ್ಮ ವನ್ನು ಅಳೆಯಬೇಕು. ಒಂದೊಂದು ವ್ಯಕ್ತಿಯ ಕಾರ್ಯ ಕಲಾಪಗಳು ಸಾವು ಹುಟ್ಟುಗಳ ಮಿತಿಯಲ್ಲಿ ಸಿಲುಕಿದಂತೆ ಕಂಡರೂ, ಅವು ಅಮರವಾದ ಜೀವನ ಪ್ರವಾಹದ ಒಂದು ಅಂಶ. ವ್ಯಕ್ತಿಯ ತೋರಿಕೆಯ ಸಾವು ಸಾವೂ ಅಲ್ಲ, ಹುಟ್ಟು ಹುಟ್ಟೂ ಅಲ್ಲ. ಆಲದ ಮರವೊಂದು ಹುಟ್ಟಿ, ಬೆಳೆದು, ಮುಪ್ಪು ಬರುವ ಮೊದಲೇ ಬೀಳಲುಗಳನ್ನು ಊರುತ್ತದೆ. ಅನಂತರ ಅದರ ಕಾಂಡವು ನಾಶವಾದರೂ ಈ ಹೊಸಬೀಲುಗಳೇ ಕಾಂಡವಾಗಿ, ಆ ಮರದ ಜೀವನ ಮುಂದೆ ಸಾಗುತ್ತದೆ ಮೊದಲಿನ ಕಾಂಡವು ಸತ್ತುದು ನಿಜವಾದರೂ, ಆಲದ ಮರ ಸತ್ತದು ನಿಜವಲ್ಲ.

### ಅಮರತ್ವದ ದಾರಿ

ಜೀವನದ ಅಮರತ್ವವನ್ನು ಹೀಗೂ ಬಣ್ಣಿಸಬಹುದು. ಬೆಕ್ಟೀರಿಯ ದಂಥ ಏಕಕಣ ಜೀವಿಗಳು ಬೆಳೆದು, ಸಾವು ಬರುವ ಮುನ್ನವೇ, ಇಬ್ಭಾಗ ಗೊಳ್ಳುತ್ತವೆ. ಆ ತುಂಡುಗಳು ತಿರುಗಿ ಬೆಳೆದು ಅವುಗಳಲ್ಲಿ ಒಂದೊಂದೂ ಮುಪ್ಪಿಗೆ ಮೊದಲು, ತಿರುಗಿ ಒಡೆಯುತ್ತ ಹೋಗುತ್ತದೆ. ಅವುಗಳ ಜೀವನ

ಹೀಗೆ ಅನಂತವಾಗಿ ಮುಂದೆ ಸರಿಯುತ್ತದೆ. ಅವುಗಳ ಬೆಳವಣಿಗೆ ಹೀಗೆ ಅನಂತವಾಗಿ ಹೋಗುವುದದಾರೆ, ಇಂದು ಪ್ರಪಂಚವೇ ಬೆಕ್ಟೀರಿಯಗಳಿಂದ ತುಂಬಿಹೋಗಬೇಡವೇ? ನಿಜ, ಏಕೆ ಹಾಗಾಗಿಲ್ಲ? ಪ್ರಪಂಚದಲ್ಲಿ ಬೆಕ್ಟೀರಿಯ ಗಳಲ್ಲದ ಲಕ್ಷೋಪಲಕ್ಷ ಜೀವಿಗಳಿವೆ. ಅವುಗಳೂ ಜೀವನಕ್ಕೆಅನಿವಾರ್ಯ. ಇಂದುಳಿದಿರುವ ಬೆಕ್ಟೀರಿಯಗಳು ಹಿಂದಿನ ಬೆಕ್ಟೀರಿಯಗಳ ಎಷ್ಟನೆಯದೋ ಕಿರಿದಾದ ಅಂಶಗಳು. ಅವುಗಳಲ್ಲಿ ಎಷ್ಟೋ ಎಷ್ಟೋ ಅಂಶಗಳು ಬದುಕಿ ನಿಂದ ನಷ್ಟವಾಗಿ ಹೋದುವು. ಆದರೂ ಈಗ ಉಳಿದಿರುವ ಬೆಕ್ಟೀರಿಯ ಗಳಲ್ಲಿ, ತೀರ ಪ್ರಾಚೀನಕಾಲದ ಬೆಕ್ಟೀರಿಯಗಳ ಜೀವನಯಾತ್ರೆಯ ವಿಸ್ತಾರ ರೂಪ ಕಾಣುತ್ತಿದೆ.

**ವ್ಯಕ್ತಿತ್ವದ ಅಮರತ್ವದ ಅಂಶ.**

ಜೀವನದಲ್ಲಿನ ವ್ಯಕ್ತಿತ್ವವು ಈ ತೆರನಾದುದು. ಒಂದು ವ್ಯಕ್ತಿಯಲ್ಲಿ ಪ್ರಕಟವಾದ ಶಕ್ತಿಗಳು ಅಭಿವೃದ್ಧಿಗೊಂಡು, ಅದನ್ನು ಅವನು ಬದುಕಿಗೆ ತರುವ ಶರೀರ ಸಾಯುವ ಮೊದಲೇ, ಆ ಶಕ್ತಿಗಳು ಸುತ್ತಲಿನ ಆವರಣದಲ್ಲಿ ಅಂದರೆ ಇತರ ವ್ಯಕ್ತಿಗಳ ಜೀವನದಲ್ಲಿ ಬೆರೆಯುತ್ತವೆ. ಆ ಮೂಲಕ ಅವು ಸಾವನ್ನು ಧಿಕ್ಕರಿಸಿ ಅಮರವಾಗುತ್ತವೆ. ಒಬ್ಬ ವ್ಯಕ್ತಿ ತನ್ನ ಬದುಕಿನಲ್ಲಿ ಇತರ ಮನುಷ್ಯ ಕುಟುಂಬವನ್ನು ಸಂಧಿಸದೆ ಹೋದರೂ, ಅವನೂ ಈ ಅಮರತ್ವವನ್ನು ಸಾಧಿಸಬಲ್ಲ. ಆ ವ್ಯಕ್ತಿ ತನ್ನ ಉದ್ದಾಮ ಜೀವನದಿಂದ ಇಲ್ಲವೆ ಉಜ್ವಲ ಪ್ರೇರಣೆಯಿಂದ ಕಾಲವನ್ನು ಧಿಕ್ಕರಿಸಿ ನಿಲ್ಲಲು ಬರುತ್ತದೆ. ಅವನಾಡಿದ ಮಾತುಗಳು ನಾಣ್ಣುಡಿಗಳಾಗಬಹುದು. ಅವನು ಕಂಡು ಹಿಡಿದ ತತ್ವಗಳು ಗ್ರಂಥಸ್ಥವಾಗಿ, ಸಾವಿರ ವರುಷಗಳ ಮುಂದಿನ ಬದುಕಿಗೆ ನೆರವಾಗಬಹುದು. ಅವನ ಕೃತಿಗಳು ಅಂದರೆ ಅವನು ಮಾಡಿದ ಯಂತ್ರ ಗಳು, ಕೆತ್ತಿದ ವಿಗ್ರಹಗಳು, ಆಡಿದ ಮಾತುಗಳು, ನೂರಾರು ವರ್ಷಗಳ ಬದುಕಿಗೆ ನೆರವಾಗಿ ಪರಿಣಾಮವನ್ನುಂಟುಮಾಡಬಹುದು. ಅದರಿಂದಲೇ ಒಬ್ಬ ಬುದ್ಧನೋ, ಇನ್ನಾವ ಋಷಿಯೋ ಆಡಿದ ಮಾತುಗಳು ಸಮ ಕಾಲೀನ ಜೀವನಕ್ಕೆ ಉಂಟುಮಾಡಿದ ಪರಿಣಾಮಕ್ಕಿಂತ ಹೆಚ್ಚಾಗಿ, ಸಾವಿರ ಎರಡುಸಾವಿರ ವರ್ಷಗಳ ತನಕ ಜೀವನಕ್ಕೆ ಬೆಳಕನ್ನು ಕೊಡುವುದು ಸಾಧ್ಯವಾಗುತ್ತದೆ. ಆದರೆ ಆ ಬುದ್ಧನ ನಡೆ, ನುಡಿ, ಕೃತಿಗಳ ವರ್ಚಸ್ಸು ಇಂದಿನವರ ಎಟುಕಿಗೆ ಸಿಗಲು, ನಮಗೂ ಅವನಿಗೂ ನಡುವೆ ಕಳೆದ ಎರಡು

ಸಾವಿರ ವರ್ಷಗಳಕಾಲ ಬದುಕಿದ್ದ ಜನಜೀವನವೇ ಕಾರಣ. ಜನಜೀವನದ ಪ್ರವಾಹದಿಂದಾಗಿ, ಅಂದಿನ ಬುದ್ಧತನ ಇಂದಿನ ತನಕವೂ ಬದುಕಿರುವಂತಾಯಿತು.

ಆ ಬುದ್ಧನು ತನ್ನ ಜೀವನ ಕಾಲದಲ್ಲಿ ಒಬ್ಬ ವ್ಯಕ್ತಿಯೆನಿಸಿದರೂ ಅವನ ಜೀವನದ ಕ್ರಿಯೆಗಳಿಗೆ ಅವನೊಬ್ಬನೇ ಸರ್ವಾಧಿಕಾರಿಯಲ್ಲ. ಅವನಿಗೂ ಹಿಂದಕ್ಕೆ ಸಾಗಿದ ಜೀವನದ ವರ್ಚಸ್ಸಿನ ಹಿರಿಯ ಸಾಕ್ಷಿಯವನು. ಅನೇಕರ ಕರುಣೆ, ಅನೇಕರ ದುಃಖ, ಅನೇಕರ ಅಶಾಂತಿಗಳು ಅವನಲ್ಲಿ ತೀಕ್ಷ್ಣವಾಗಿ ಪ್ರಕಟಗೊಂಡು, ಅವನ ಮೂಲಕವಾಗಿ ಸುತ್ತಲಿನ ಜೀವನಕ್ಕೆ ನೆರವಾಗುವ ಪ್ರತ್ಯುತ್ತರಗಳನ್ನು ಪಡೆದುವು.

**ಸಮುಷ್ಟಿ ರೂಪ**

ಜೀವನವನ್ನು ಹೀಗೆ ಸಮುಷ್ಟಿಯಿಂದ ನಾವು ನೋಡಬೇಕೇ ವಿನಾ ವ್ಯಕ್ತಿ, ವ್ಯಕ್ತಿಗಳನ್ನು ಬೇರೆ ಬೇರೆಯಾಗಿ ಎಣಿಸಿ ತಿಳಿಯುವುದು ತಪ್ಪು. ಆಗ 'ಸಾವು' ಎಂಬುದು ಅರ್ಥವಿಲ್ಲದ ಒಂದು ಮಾತೆನಿಸೀತು. 'ವ್ಯಕ್ತಿ' ಎಂಬುದು ಜೀವನ ಶಕ್ತಿಯು ಮೊಳೆತು, ಬೆಳೆದು, ವಿಸ್ತರಿಸಲು ಅನುಕೂಲವಾದ ಒಂದು ಸಾಧನ. ವ್ಯಕ್ತಿಯ ಶರೀರದಲ್ಲಿ ಈ ಉದ್ದೇಶಗಳನ್ನು ನೆರವೇರಿಸಿ ಸಾಗಿಸುವ ಚೇತನವಿರುವಷ್ಟು ಕಾಲ ಅದು ಬದುಕುವುದು ಅವಶ್ಯ. ತನ್ನಿಂದಾಗುವ ಕೆಲಸ ಮಾಡಿ ಮುಗಿಸಿದರೆ ಆ ಶರೀರದ ಕೆಲಸವಾಯಿತು. ಅಷ್ಟರೊಳಗೇನೆ ವ್ಯಕ್ತಿಯ ಅನೇಕ ವಿಧದ ಶಕ್ತಿಗಳು ಸುತ್ತಲಿನ ಅನೇಕ ಜೀವಿಗಳಲ್ಲಿ ಮೂಡಿ, ಮುಂದುವರಿಯುವುದರಿಂದ ಆ 'ವ್ಯಕ್ತಿತ್ವ'ಕ್ಕೆ ಕೊನೆ ಬಂದರೂ, ಜೀವನಕ್ಕೆ ಕೊನೆಯಿಲ್ಲ. ಈ ಮಾತು ಸ್ವಾಭಾವಿಕವಾಗಿ ಆಗುವ ಮರಣಗಳಿಗೆ ಅನ್ವಯಿಸಬಹುದೇ ಹೊರತು, ಎಳೆತನದ ಸಾವುಗಳಿಗೊ, ಕೊಲೆ, ಅವಘಡ, ಸಿಡುಗು ಇವುಗಳಿಂದ ಬರುವ ಅಕಾಲ ಮರಣಕ್ಕೋ ಅನ್ವಯಿಸೀತೇ-ಎಂದು ನೀವು ಕೇಳಬಹುದು. ಮೃತ್ಯುವಿಗೆ ತುತ್ತಾಗುವ ವ್ಯಕ್ತಿಗಳೂ ಬದುಕಿರುವಷ್ಟು ಕಾಲ ಇತರರ ಜೀವನದಲ್ಲಿ ಬೆರೆತು ಪಾಲುಗಾರರಾಗುತ್ತಾರೆ. ಆದರೆ ಅವರ ವ್ಯಕ್ತಿತ್ವದ ವಿಸ್ತರಣಕ್ಕೆ ಅವರ ಶರೀರಗಳು ಸಂಪೂರ್ಣ ಸಹಾಯವಾಗುವುದಿಲ್ಲ. ಅಂಥ ವ್ಯಕ್ತಿಗಳ ಬಾಳ್ವೆ ಅಪೂರ್ಣ; ನಿಜ; ಆದರೆ ನಾವು ಈ ತೀರ್ಮಾನವನ್ನು—ಕೆಲವೊಂದು ಜೀವಿಗಳನ್ನೂ ಅವುಗಳ ಹಿತಾಹಿತಗಳನ್ನೂ, ಬೇರೆಯಾಗಿಯೇ ಎಣಿಸಿ ಮಾಡಲು ಬರು

ವಂತಿಲ್ಲ. ಒಟ್ಟು ಜೀವನ ಪ್ರವಾಹದಲ್ಲಿ ಲಕ್ಷೋಪ ಲಕ್ಷ ಜೀವಜಾತಿಗಳು ಸೇರಿವೆ. ಆ ಒಂದೊಂದು ಜೀವಜಾತಿಯು ಬೆಳವಣಿಗೆಯೂ ಆಗಬೇಕು. ಆಗ ಒಂದು ಜೀವಜಾತಿಯ ಸ್ವಾರ್ಥವು ಇನ್ನೊಂದು ಜೀವಜಾತಿಯ ಸ್ವಾರ್ಥಕ್ಕೆ ಅಡ್ಡವಾಗಿ ಬರಬಹುದು. ಮನಸ್ಯ ಕುಟುಂಬದಲ್ಲೇ, ಒಂದು ಜೀವ ಕುಲದ ಸ್ವಾರ್ಥವು ಇನ್ನೊಂದಕ್ಕೆ ಅಡ್ಡವಾಗಿ ಬಂದು, ಸಮರಗಳಾಗಿ, ವ್ಯಕ್ತಿಗಳ ಅಕಾಲ ಮರಣವನ್ನು ಸಾಧಿಸಬಹುದು. ಅಂಟುರೋಗದ ಕ್ರಿಮಿಗಳಿಗೂ ಮನುಷ್ಯ ಸಮುದಾಯಕ್ಕೂ ಇಂಥ ಕಾಳಗವಾಗಬಹುದು. ಇದರಿಂದ ಮಾನವವ್ಯಕ್ತಿಗೆ ಅಹಿತವಾದೀತು. ಜೀವನ ಪ್ರವಾಹಕ್ಕೆ ಅಹಿತವಾಗಲೂ ಬಹುದು. ಆದರೆ ಇಂಥ ಅನೇಕ ಅಹಿತಗಳು ಜೀವನ ಪ್ರವಾಹಕ್ಕೆ ಎಚ್ಚರ ಹುಟ್ಟಿಸಿ, ಮುಂದೆ ಇದಕ್ಕೂ ಕಡಿಮೆ ಹಾನಿಯಾಗುವಂತೆ ಮಾಡಬಹುದು. ಬಹು ದೊಡ್ಡ ಜೀವನ ಪ್ರವಾಹದ ಸೆಳವಿನಲ್ಲಿ ಆಗುವ ಎಷ್ಟೋ ಘರ್ಷಣೆ ಗಳು, ವ್ಯಕ್ತಿಗೆ ಅರ್ಥವಾಗದೆಹೋಗುವುದರಲ್ಲಿ ಆಶ್ಚರ್ಯವಿಲ್ಲ. ಜೀವನ ಪ್ರವಾಹದ ಹಿತವನ್ನು ಎಣಿಸುವಲ್ಲಿ ಮಾನವನಿಗೆ ಮೃತ್ಯುವಾಗಿ ಬರುವ ರೋಗಾಣುಗಳೂ ಮುಖ್ಯವೇ.

**ಸಾವು, ವಿಶ್ರಾಂತಿ**

ನಾವು ನಮ್ಮ ಎಟುಕಿಗೆ ಸಿಗುವ ಜೀವನವನ್ನು ತಿಳಿಯಲು ಪ್ರಯತ್ನಿಸಿ ದರೆ ಸಾಕು. ನಾವು ನಮ್ಮಲ್ಲಿ ಚೇತನ ತುಂಬಿರುವಷ್ಟು ದಿನ, ಸುತ್ತಲಿನ ಬದುಕಿಗೆ ಆದಷ್ಟು ಕಡಮೆ ಹಾನಿ ಮಾಡಿ, ಜೀವನದ ಆದಷ್ಟು ಪೂರ್ಣ ಲಾಭ ಹೊಂದಿ, ನಮ್ಮ ಮನಸ್ಸೂ, ಕೃತಿಗಳೂ ಎಷ್ಟು ಹಿಗ್ಗಿ ವಿಸ್ತರಿಸ ಬಹುದೋ ಅಷ್ಟಕ್ಕೆ ಸಮನಾಗಿ ಬೆಳೆದರಾಯಿತು. ಮುಂದೆ ಶರೀರ ಕಳಚೀ ತೆಂಬ ಭೀತಿ ಏತಕ್ಕೆ? ಅದರಿಂದ ಹೆಚ್ಚಿನ ಕೆಲಸವಾಗುವುದಿಲ್ಲವೆಂದೇ? ಅದು ಕಳಚುತ್ತದೆ. ದುಡಿದ ಜೀವನಕ್ಕೆ ಸಾವು ವಿಶ್ರಾಂತಿ; ಬಹುಮಾನ.

ವ್ಯಕ್ತಿಯು ತನ್ನನ್ನು ಬೇರೆಯೇ ಸ್ವತಂತ್ರ ಜೀವಿಯೆಂದು ಭ್ರಮಿಸಿ ನಡೆಯುವುದರಿಂದ, ಒಟ್ಟು ಜೀವನಕ್ಕೆ ಆಗುವ ಹಾನಿ ಸ್ವಲ್ಪವಲ್ಲ. ಆ ತನ್ನ ತನದ ಕಲ್ಪನೆಯಿಂದಾಗಿ, ಬರಿಯ ಸ್ವಂತ ದುಃಖವನ್ನು ನಿವಾರಿಸಿಕೊಂಡು, ಸುಖವನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಆತ ಶ್ರಮಪಡುತ್ತಾನೆ. ಈ ದೃಷ್ಟಿ ಯನ್ನು ಸಾರುವ ತತ್ವಜ್ಞಾನ ಉಚ್ಚ ಧ್ಯೇಯವನ್ನು ಸಾರಿದಂತೆ ಕಂಡರೂ, ಅದು ಮನುಷ್ಯನಲ್ಲಿ ಸಂಕುಚಿತ ಶೀಲಗಳನ್ನೇ ಬೆಳೆಯಿಸುತ್ತದೆ. ವ್ಯಕ್ತಿ,

ಇಂದಿನ ದಿನದಲ್ಲಿ ಬರಿಯ ತನ್ನ ಸುಖಕ್ಕಾಗಿ ಹೆಣಗಾಡುವ ಜೀವಿಯಾಗಿ ಕಾಣಿಸಿದರೂ, ಬದುಕು ಮುಂದುವರಿದಂತೆ, ಜೀವನ ಪಥವು ವಿಸ್ತರಿಸಿದಂತೆ ಈ ತೆರನ ವ್ಯಕ್ತಿಪರ ಭಾವನೆಯು ಕಳಚೀತು. ಆ ತತ್ವವನ್ನು ಅವಲಂಬಿಸಿ ಕಟ್ಟಿದ ತತ್ವಜ್ಞಾನಗಳೂ ಕುಸಿದಾವು.

### ಬೇರೆ ಆತ್ಮವಿಲ್ಲ

ವ್ಯಕ್ತಿಗೆ ಬೇರೆಯೇ ಆದಂಥ ಆತ್ಮವಿಲ್ಲ. ಆತ್ಮಕ್ಕೆ ಬೇರೆಯೇ ಆದ ಜನ್ಮ ವಿಲ್ಲ–ಎಂಬುದನ್ನು ನಾವು ತಿಳಿಯಬೇಕು. ಎಲ್ಲ ಜೀವಿಗಳ ಜೀವನವೂ ಅಷ್ಟು ಅನ್ಯೋನ್ಯವಾಗಿ ಬೆರೆತದ್ದು. ಎಲ್ಲ ಕಾಲದ ಬದುಕೂ, ಅಷ್ಟು ಅನ್ಯೋನ್ಯ ವಾದ, ಅವಿರತವಾದ ಒಂದು ಪ್ರವಾಹ. ಹರಿಯುವ ನದಿಯೊಂದರಲ್ಲಿ ಬಿಂದಿಗೆಯೊಂದನ್ನು ಮುಳುಗಿಸಿ, ಅದರೊಳಗಿನ ನೀರು ಬೇರೆಯೇ ಎಂದು ಭ್ರಮಿಸುವುದು ಸಾಧ್ಯವಿದೆ. ಆದರೆ ಆ ಪಾತ್ರೆಯನ್ನು ಒಮ್ಮೆ ಹೊರಕ್ಕೆ ತೆಗೆದು, ತಿರುಗಿ ಅದೇ ತಾವಿನಲ್ಲಿ ಸುರಿದಲ್ಲಿ ಹಿಂದಿನ ಮತ್ತು ಈಗಿನ ನೀರು ಗಳೆರಡೂ ಒಂದೇಯೇ? ಮೊದಲಿನ ಪಾತ್ರೆಯೊಳಗಣ ನೀರು, ಪಾತ್ರೆ ಬಿಟ್ಟ ಕ್ಷಣಕ್ಕೆ ಪ್ರವಾಹದ ಪಾಲಾಗಿ, ನೂರಾರು ಜಲಕಣಗಳ ಅಂಶವಾಗಿ ಹೋಯಿತು. ಇನ್ನೊಮ್ಮೆ ನಾವು ಪಾತ್ರೆ ಮುಳುಗಿಸಿದಾಗ ಬರುವ ನೀರಿನ ಕಣಗಳೇ ಬೇರೆ.

### ಇಂದಿನ ವ್ಯಕ್ತಿ

ವ್ಯಕ್ತಿಗೆ ಇಂದು ದೊರೆಯುವ ಬದುಕು ಹಿಂದೆಯೂ ದೊರಕಿಲ್ಲ; ನಾಳೆಯೂ ದೊರಕುವುದಿಲ್ಲ. ಈ ವ್ಯಕ್ತಿ ಇಂದಿಗೆ ಮಾತ್ರ ಉಳಿಯುವವನು. ಈ ವ್ಯಕ್ತಿತ್ವವೂ ಇಂದಿನದು. ಅದು ವ್ಯಕ್ತವಾಗುವ ಮನಸ್ಸು ಶರೀರಗಳೂ ಇಂದಿನವು. ಆದುದರಿಂದ ಇಂದು ಸಾಧಿಸುವ, ಪಡೆಯುವ ಜೀವನದ ವಿಕಾಸವನ್ನು ಇಂದಿನ ಬದುಕಿನಲ್ಲೇ ನಾವು ಸಾಧಿಸಿಕೊಂಡು ಜೀವನ ಪ್ರವಾಹಕ್ಕೆ ನೆರವಾಗಬೇಕು. ಜೀವಿಗೆ ಬದುಕು ಮುಖ್ಯ; ಅದೇ ಸರ್ವಸ್ವ. ನಾಳೆ ಈ ಜೀವಿಯೂ ಇಲ್ಲ. ಈ ಬದುಕೂ ಇಲ್ಲ. ಆದುದರಿಂದಲೇ ವ್ಯಕ್ತಿಗೆ ಜೀವನ ಮಾಯೆಯೂ ಅಲ್ಲ; ಅದು ವ್ಯರ್ಥವೂ ಅಲ್ಲ. ಯಾವೆಲ್ಲ ಶಾರೀರಿಕ ಮಾನಸಿಕ, ಚೇತನಗಳೊಡನೆ ವ್ಯಕ್ತಿ ಹುಟ್ಟಿದನೋ, ಅವೆಲ್ಲವುಗಳೂ ಆ ವ್ಯಕ್ತಿಯ ಬೆಳವಣಿಗೆಗಾಗಿಯೇ ಇವೆ. ಅವೆಲ್ಲವುಗಳ ಉಪಯೋಗವನ್ನೂ ಅವುಗಳು ಕೊಡುವ ಅನುಭವದ ಸೊಗಸನ್ನೂ, ತನಗೂ, ತಾನು ಅಂಗ

ವಾಗಿರುವ ಒಟ್ಟು ಜೀವನಕ್ಕೂ ಉಳಿಸಿಕೊಂಡು, ವಿಶಾಲಗೊಳ್ಳುವುದೇ ಜೀವನದ ಕೆಲಸ. ತನ್ನ ಶಕ್ತಿಗಳನ್ನು ಜಡಗೊಳಿಸಿ, ಜಗತ್ತನ್ನು ನಿರಾಕರಿಸಿ, ಜೀವನವು ದೊಡ್ಡದಾಗಲಾರದು. ಜೀವಿಯೂ ದೊಡ್ಡವನಾಗಲಾರ. ಇಲ್ಲಿ ಬದುಕಲಾರದವರು, ಬದುಕೇ ಒಲ್ಲೆ ಎನ್ನುವವರು, ಒಡೆದು ಸಂತಾನ ಹೆಚ್ಚಿಸದೆ ಹೋಗುವ ಬೆಕ್ಟೀರಿಯದಂತೆ, ಜೀವನ ಪ್ರವಾಹಕ್ಕೇನೆ ವ್ಯರ್ಥ ರಾಗುತ್ತಾರೆ.

## ವ್ಯಕ್ತಿ ಬೆಳೆಯಬೇಕು

ವ್ಯಕ್ತಿ ಬೆಳೆಯಬೇಕು. ಆತ ಜೀವನದ ಸೊಗಸುಗಳನ್ನು ಅನುಭವಿಸ ಬೇಕು. ಆದರಿಂದ ಕಲಿಯುವ ಪಾಠಗಳನ್ನು ಕಲಿತುಕೊಳ್ಳಬೇಕು-ಎಂದೊಡನೆ, ಸಾಲ ಮಾಡಿಯಾದರೂ ತುಪ್ಪವನ್ನು ತಿನ್ನೆನ್ನುವ ಚಾರ್ವಾಕಮತ ಸ್ಥಾಪನೆಯಾಗುವುದಿಲ್ಲ. ಸಾಲ ಮಾಡುವ ಚಾರ್ವಾಕನಿಗೆ ಸಾಲ ಕೊಡುವ ಸಾಲಿಗನ ಸುಖ ದುಃಖವಿರದು. ಆತನೂ ಬದುಕಬೇಕೆಂಬ ಸಿದ್ಧಾಂತವಿಲ್ಲ. ಆದರೆ ಯಾವಾತ-ಒಟ್ಟು ಜೀವನದ ಅಂಶವಾಗಿಯೇ ತಾನೊಬ್ಬನಿದ್ದೇನೆ, ತನ್ನ ಸುಖದುಃಖಗಳು ಒಟ್ಟು ಬದುಕಿನಿಂದ ಬರುವುವು, ಒಟ್ಟು ಬದುಕಿನಲ್ಲಿ ಸೇರಿ ಹೋಗುವುವು—ಎಂದು ತಿಳಿದಿರುಷ್ಟು ಕಾಲ, ಆ ತೆರನ ವರ್ತನೆಗೆ ಅವಕಾಶವಿಲ್ಲ.

## ಹಿಂದಿಗಿಂತ ಮುಂದು ಹಿರಿದು

ವ್ಯಕ್ತಿ ತಾನೇ ತೀರ ಮುಖ್ಯನು ಎಂದು ತಿಳಿಯುವ ಕಾರಣವೂ ಇಲ್ಲ. ಪ್ರಪಂಚವೇ ಮರುಳು ಎಂದು ಆತ ತಿಳಿಯಬೇಕಾಗಿಯೂ ಇಲ್ಲ. ಒಬ್ಬ ಬುದ್ಧನೋ, ಯೇಸುವೋ, ಎಡಿಸನನೋ-ಎಲ್ಲರೂ ಬದುಕಿಗೆ ಕಳೆಯನ್ನು ಕೊಟ್ಟವರೇ. ಆದರೆ ತಮ್ಮಿಂದಲೇ ಈ ವಿಶ್ವ ಬೆಳೆದಿದೆ—ಎಂದು ಹೇಳುವ ಹೆಮ್ಮೆಯ ಹಕ್ಕು ಅವರಾರಿಗೂ ಇಲ್ಲ. ಜೀವನ ಪ್ರವಾಹದಲ್ಲಿ ಅವಶ್ಯಕವೂ ಅನುಕೂಲವೂ ಆದ ಪರಿಸ್ಥಿತಿಗಳ ಫಲವೇ ಇಂಥ ವ್ಯಕ್ತಿಗಳು. ಸ್ವತಂತ್ರವಾಗಿ ಅವರೇ ಅವರ ಸರ್ವಸ್ವದ ನಿರ್ಮಾಣಕರ್ತರಲ್ಲ, ಜೀವನದ ಶಕ್ತಿ ಅಷ್ಟು ಅಗಾಧವಾಗಿದೆ. ಅದು ಅನಂತ ಹಾನಿಗಳನ್ನು ತಡೆದುಕೊಂಡು ಇಲ್ಲಿಯ ತನಕವೂ ಹರಿದುಬಂದಿದೆ. ಮೆಸೆಜೋಯಿಕ್ ಮಹಾ ಯುಗದಲ್ಲಿ "ಡಿನೋಸೌರಸ್" "ಬ್ರೋಂಟೊಸೌರಸ್" ಮೊದಲಾದ ಹೆಜ್ಜೀವಗಳು ಹುಟ್ಟಿ "ನಮ್ಮಂಥ ದೊಡ್ಡ ಜೀವಿಗಳು ಇನ್ನಾರು?" ಎಂದು ಹೇಳಬಹುದಾದ

ಕಾಲವಿದ್ದಿತ್ತು. ಇಂದಿನ ಯುಗದ ಆನೆಗಳು ಆ ಜೀವಗಳ ಮೊಣಗಂಟಿನಷ್ಟು ಬರುತ್ತಿರಲಿಲ್ಲ, ಆದರೆ ಇವತ್ತಿನ ಆನೆಯಲ್ಲಿ ವಿಕಸಿತವಾದ ಬುದ್ಧಿ ಶಕ್ತಿ ಅವರದೇ ಹಿರಿಯಸಾದ ಹೆಗ್ಗಾಳಿಗೂ ಇದ್ದಿರಲಿಲ್ಲ. ಹರಿಯುತ್ತಿರುವ ನದಿಯ ಮುಂದು, ಹಿಂದಿಗಿಂತಲೂ ದೊಡ್ಡದು. ಜೀವನ ಪ್ರವಾಹವೂ ಹಾಗೇನೆ. ಅಲ್ಲಿ-ನಾಳಿನ ಬದುಕು ನಿನ್ನೆಗಿಂತಲೂ ದೊಡ್ಡದೆಂಬುದೇ ಸತ್ಯ. ನಾಡಿದ್ದಿನ ಪಾಲಿಗೆ ಆ ನಾಳೆಯೂ ಸಣ್ಣದಾಗಬಹುದು. ಹೀಗಿರುವಲ್ಲಿ, ವ್ಯಕ್ತಿಯು ತಾನೇ ಬಲು ದೊಡ್ಡವನೆಂದು ತಿಳಿಯಬಾರದು.

ಒಟ್ಟು ಜೀವನ ವಿಸ್ತರಿಸುತ್ತಿರುವುದರ ಫಲವಾಗಿಯೇ ಅನೇಕ ದೊಡ್ಡ ವ್ಯಕ್ತಿಗಳು ಹುಟ್ಟುತ್ತಾರೆ. ಜೀವ ಸಮುದಾಯದಲ್ಲಿ ಎಷ್ಟೋ ಜೀವಿಗಳು ಹೆಚ್ಚಿನ ಉಪಯೋಗಕ್ಕೆ ಬಾರದೆ ಸಾಯುತ್ತವೆ. ಇನ್ನೆಷ್ಟೋ ಜೀವಿಗಳು ಹೊರೆ ಹೊರುವ ಆಳಿನಂತೆ, ಬರಿ ಜೀವನ ಶಕ್ತಿಯನ್ನಿಷ್ಟೇ ಉಳಿಸಿಕೊಂಡು ಸಾಯುತ್ತವೆ. ಆದರೂ—ಆಗಾಗ ಕೆಲವೊಂದು ಅಪೂರ್ವ ವ್ಯಕ್ತಿಗಳು ಹುಟ್ಟಿ, ತಮ್ಮ ಚೈತನ್ಯದಿಂದ ನೆರೆಕರೆಯ ಜೀವನಕ್ಕೆ ಹುಮ್ಮಸ ಕೊಡುತ್ತಾರೆ. ಹೆರವರ ಬದುಕು ವಿಕಸಿಸುವುದಕ್ಕೆ ಕಾರಣರಾಗುತ್ತಾರೆ. ಅವರ ವಿಚಾರ ಸರಣಿಯ ಪರಿಣಾಮ ಒಟ್ಟು ಬದುಕಿಗೆ ದೊರೆಯುತ್ತದೆ. ಅವರಂತೆಯೆ, ಒಟ್ಟು ಜೀವನಕ್ಕೆ ಹಾನಿಕಾರಕ ಶಕ್ತಿಗಳನ್ನು ಸಲ್ಲಿಸುವ 'ಜೆಂಗೀಸ್ ಖಾನರು' 'ಹಿಟ್ಲರರು' ಇದ್ದೇ ಇರುತ್ತಾರೆ. ಒಟ್ಟು ಜೀವನದ ಅನೇಕ ಬಗೆಯ ಕೊರತೆ ಗಳೇ ಪ್ರತಿಬಿಂಬಿಸಿ, ಇಂಥ ವ್ಯಕ್ತಿಗಳ ನಿರ್ಮಾಣವಾಗುತ್ತದೆ. ಬುದ್ಧನಂಥ ವ್ಯಕ್ತಿಗಳು ಜೀವನ ರಥದ ಗಾಲಿಯನ್ನು ನಾಲ್ಕು ಸುತ್ತುಗಳಷ್ಟು ಮುಂದೆ ಸೆಳೆದರೆ, ಜೆಂಗೀಸ್ ಖಾನರು ಒಂದೆರಡು ಸುತ್ತುಗಳಷ್ಟು ಅದನ್ನು ಹಿಂದೆ ಸೆಳೆಯುತ್ತಾರೆ. ಲಕ್ಷ ವರುಷಗಳ ಹಿಂದಿನ ಗವಿ ಮನುಷ್ಯ ಇಂದಿನ ಮನುಷ್ಯ ನಲ್ಲಿ ಫಲಗೊಂಡುದನ್ನು ಕಾಣುವಾಗ, ಜೀವನ ಪ್ರವಾಹ ಮುಂದುವರಿದಿದೆ ಎಂದೇ ಹೇಳಬೇಕು.

### ಅನಂತ ಜೀವನದ ವರ್ತಮಾನ ದೃಶ್ಯ

ಈ ಪ್ರವಾಹದ ಅಂಶವಾದ ವ್ಯಕ್ತಿಯ ಜೀವನವನ್ನು ನಾವು ಏನೆಂದು ಕರೆಯಬೇಕು? ಅದು ಪ್ರತ್ಯೇಕ ಶರೀರದಲ್ಲಿ ವ್ಯಕ್ತವಾಗುತ್ತಿದೆಯಾದರೂ ಅದು ಸ್ವತಂತ್ರವಲ್ಲ. ಅದರಲ್ಲಿ ಸ್ವತಂತ್ರವೆನಿಸಿದ ಮನಸ್ಸು ಕಾಣಿಸಿದರೂ ಅಷ್ಟು ನಿರಂಕುಶ ಮನಸ್ಸು ಅದಲ್ಲ. ಆ ಶರೀರದಲ್ಲಿ ಪ್ರಕಟವಾಗುವ ಗುಣ,

ಕ್ರಿಯೆಗಳನ್ನು ಹಿಂದಿನ ಯುಗಕ್ಕೆ ಬಿಗಿಯುವಂಥ ಸ್ವಭಾವ (instinct), ವರ್ತನೆ (behaviour) ಇವುಗಳು ಮಾತ್ರವೂ ಅದಲ್ಲ. ಇವುಗಳಿಂದ ವ್ಯಕ್ತಿಯು ಬದ್ಧನಾದರೂ ಅವುಗಳಿಂದಲೂ, ಸುತ್ತಲಿನ ಪರಿಸ್ಥಿತಿಯಿಂದಲೂ ಸ್ವಂತ ಪ್ರೇರಣೆಯಿಂದಲೂ, ಕಾಣಿಸುವ ಈ ಜೀವನವನ್ನು ವ್ಯಕ್ತಿ ಎನ್ನಿರಿ, ಆತ್ಮ-ಎನ್ನಿರಿ, ಇನ್ನಾವುದೇ ಹೆಸರಿನಿಂದ ಕರೆಯಿರಿ, ಅದು ಅನಂತ ಜೀವನದಲ್ಲಿ ವರ್ತಮಾನ ಕಾಲದ ಒಂದು ಚೇತನಮಯ ದೃಶ್ಯವೆನ್ನಬೇಕು.



# ೧೦. ಇಂದು ದೊಡ್ಡದು

**ಜೀವನದ ಉದ್ದೇಶವೇನು?**

ಮನುಷ್ಯನನ್ನು ಸಾವು ಹುಟ್ಟುಗಳ ಪ್ರಶ್ನೆಗಳು ಬೆರಗುಗೊಳಿಸಿದಷ್ಟೇ ಅಪಾರವಾಗಿ ಸೃಷ್ಟಿ ವೈಚಿತ್ರ್ಯವೂ ಬೆರಗುಗೊಳಿಸುತ್ತದೆ. ತಾನೇಕೆ ಹುಟ್ಟಿದ್ದೇನೆ, ತಾನೇಕೆ ಸಾಯುತ್ತಿದ್ದೇನೆ—ಎಂಬ ಪ್ರಶ್ನೆಗಳನ್ನು ಕುರಿತು ಅವನು ವಿಚಾರಿಸಿ ತನ್ನ ಜೀವನದ ಉದ್ದೇಶವೇನು–ಎಂಬ ತರ್ಕಕ್ಕೆ ಹೊರಡುವಂತೆ, ಈ ಪ್ರಪಂಚದ ಉದ್ದೇಶವೇನಿದ್ದೀತು ಎಂಬ ತರ್ಕಕ್ಕೂ ಹೊಗುತ್ತಾನೆ. ತನ್ನ ಬದುಕನ್ನು ಕುರಿತು ವ್ಯಕ್ತಿಯಾದವನು ಪ್ರಶ್ನೆ ಮಾಡುವುದು ಸ್ವಾಭಾವಿಕ. ತಾನು ಬದುಕಿರುವಷ್ಟು ಮಿತ ಕಾಲದಲ್ಲಿ ಹೇಗಿರಬೇಕು–ಎಂದು ವಿಚಾರ ಮಾಡುವುದು ಅವನ ಎಟುಕಿಗೆ ಸಿಗಬಹುದಾದ ವಿಷಯ. ಆದರೆ ಅದೇ ಉಸಿರಿನಲ್ಲಿ-ಅನಂತ ವಿಶ್ವದ ವ್ಯಾಪಾರವನ್ನೇ ಕುರಿತು “ಇದರ ಉದ್ದೇಶವೇನು?” ಎಂದು ಕೇಳಿದರೆ, ತನ್ನ ಅಳತೆಗೆ ಮೀರಿದ ಕೆಲಸಕ್ಕೆ ತೊಡಗಿದಂತೆ. ತನ್ನ ಜೀವನ ಪ್ರಪಂಚಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿಯುವಷ್ಟು ಸುಲಭವಾಗಿ ಪ್ರಪಂಚದ ರಹಸ್ಯ ತಿಳಿದೀತೆ? ಎಷ್ಟೋ ವ್ಯಕ್ತಿಗಳು—ಪ್ರಪಂಚದ ಗುರಿ ಏನು?—ಎಂದು ತಿಳಿಯುವುದರಲ್ಲೇ ಕಾಲಕಳೆದುದುಂಟು. ಹಾಗೆ ತಿಳಿಯುವುದೇ ಜೀವನದ ಉದ್ದೇಶ–ಎಂದು ನಂಬುವವರೂ ಉಂಟು. ಇವುಗಳಲ್ಲಿ–ಮೊದಲನೆಯ ತರ್ಕದಿಂದ ಎರಡನೆಯ ವಿಚಾರ ಸಿದ್ಧವಾಗುವುದಿಲ್ಲ.

**ಮಿತ ಜ್ಞಾನ**

ಈ ವಿಷಯಕ್ಕೆ ಗಮನವನ್ನು ಕೊಡುವ ಮೊದಲು ವ್ಯಕ್ತಿಯು ವಿಶ್ವ ವ್ಯಾಪಾರದ ಪೂರ್ಣ ರಹಸ್ಯವನ್ನು ತಿಳಿಯಲು ಶಕ್ತನೇ?—ಎಂದು ಪ್ರಶ್ನೆ ಮಾಡುವ. ಪ್ರಥಮದಲ್ಲಿಯೆ ವಿಶ್ವವ್ಯಾಪಾರವು ನಿರ್ದಿಷ್ಟವಾದ ಇಂಥದೇ ಗುರಿಯನ್ನು ಸೇರುವುದುಂಟೇ ಎಂಬ ಪ್ರಶ್ನೆ ಉಂಟಾಗುತ್ತದೆ. ಮನುಷ್ಯ ಎಲ್ಲಕ್ಕೂ ಮೊದಲು, ತನ್ನ ಅಳತೆಯೇನು, ತನ್ನ ಶಕ್ತಿಗಳ ಅಳತೆಯೇನು–ಎಂದು ವಿಚಾರಿಸಬೇಡವೆ? ವ್ಯಕ್ತಿಯು ತನ್ನ ಮನಸ್ಸಿನ ಆಳವನ್ನೇ ತಿಳಿಯುವುದ ಕಷ್ಟಕರವಾದ ಸಂಗತಿ. ಅದಕ್ಕೂ ಮೊದಲು ತನ್ನ ಯಾವತ್ತು ಸ್ವಾರ್ಥಗಳನ್ನೂ ಸಿದ್ಧಾಂತಗಳನ್ನೂ ಬದಿಗಿರಿಸಬೇಕಾಗುತ್ತದೆ. ತನಗೇ ಅರಿ

ವಿಲ್ಲದಂತೆ, ತನ್ನಲ್ಲಿ ಮನೆಮಾಡಿಕೊಂಡಿರುವ ಅನೇಕ ಮೊಂಡ ಶೀಲಗಳನ್ನೂ, ತೀರ್ಮಾನಗಳನ್ನೂ, ತರ್ಕಸರಣಿಯನ್ನೂ ಆತ ದೂರವಿರಿಸಬೇಕಾಗುತ್ತದೆ. ಹಾಗೆ ಮಾಡಿದ ಮೇಲೆಯೂ—ವಿಶ್ವ ಜೀವನದಂಥ, ಕಲ್ಪನೆಯ ಎಟುಕಿಗೂ ಮೀರಿದ ವಿಷಯವನ್ನು, ತಿಳಿಯಲು ಅವನ ಬದುಕು ಎಷ್ಟು ವಿಸ್ತಾರವಾಗಿರಬೇಡ? ವಿಶ್ವದ ಅನೇಕ ತಾರೆ, ಸೂರ್ಯ, ಗ್ರಹಗಳ ಸಮುದಾಯದಲ್ಲಿ ಅವನಿರುವ ಭೂಮಿ ಒಂದು ಧೂಳಿನ ಕಣ. ಆ ಭೂಮಿಯಲ್ಲಿ ವಾಸಿಸುವ ಕೋಟ್ಯಾನುಕೋಟಿ ಜೀವಿಗಳಲ್ಲಿ ಮಾನವರು ಒಂದು ಸಣ್ಣ ಪಂಗಡ. ಈ ಮನುಷ್ಯ ವರ್ಗದಲ್ಲೇ ಬೇರೆ ಬೇರೆ ಒಳಗಗಳು, ಬೇರೆ ಬೇರೆ ಆವರಣದಲ್ಲಿ, ಕಾಲಗಳಲ್ಲಿ ಬೆಳೆದು, ಅನೇಕ ಬಗೆಯ ಸಭ್ಯತೆ, ಸಂಸ್ಕೃತಿಗಳನ್ನು ಕಟ್ಟುತ್ತ ಬಂದಿವೆ. ಅಂಥ ನೆಲೆಗಟ್ಟಿನ ಮೇಲೆ—ವ್ಯಕ್ತಿಯಾದವನ ಶೀಲ, ಮನಸ್ಸು, ಜೀವನವನ್ನು ಕುರಿತಾದ ತೀರ್ಮಾನಗಳು ಉತ್ಪನ್ನವಾಗಿವೆ. ತಾನೆಷ್ಟೇ ದೊಡ್ಡವನಿರಲಿ, ಒಬ್ಬ ಮನುಷ್ಯ ಅವೆಲ್ಲವುಗಳನ್ನೂ ತಿಳಿಯಬಲ್ಲನೆ? ಜೀವನ ಪ್ರವಾಹದ ಉದ್ದೇಶವನ್ನು ಕುರಿತು ಪ್ರಶ್ನೆಮಾಡುವ ಮನುಷ್ಯ-ಆ ಪ್ರವಾಹ ಬರಿಯ ಮನುಷ್ಯರಿಂದಲೇ ತುಂಬಿದೆಯೆಂದು ತಿಳಿದರೆ ಹೇಗೆ? ಅಥವಾ ಆ ಪ್ರವಾಹದಲ್ಲಿ ಪರಿಪಕ್ವಕ್ಕೆ ಬಂದವನು ಮನುಷ್ಯನು ಮಾತ್ರ-ಎಂದು ನಿರ್ಧರಿಸಿದರೆ ಹೇಗೆ? ಮನುಷ್ಯ ಜೀವಿ ಈ ಪ್ರವಾಹದ ಒಂದು ತೀರ ಕಿರಿಯ ಅಂಶ. ಅವನ ಬಗೆಗೂ, ಅರಿವಿಗೂ ಹೊರಗಾಗಿರುವ ಜೀವಿಗಳು ಅಸಂಖ್ಯವಾಗಿವೆ. ಈ ಎಲ್ಲ ಒಟ್ಟು ಜೀವನ ಪ್ರವಾಹದ ರಹಸ್ಯ ಇಲ್ಲವೆ ಉದ್ದೇಶಗಳನ್ನು ತಿಳಿಯಲು ಪ್ರಯತ್ನಿಸುವ ಮನುಷ್ಯನ ಜ್ಞಾನದ ವಿಸ್ತೃತಿಯೆಷ್ಟು?

**ಅತ್ಯಲ್ಪ ಪರಿಚಯ**

ವಿಶ್ವವ್ಯಾಪಾರದಲ್ಲಿ ಜೀವಕೋಟಿಗಳು ಎಷ್ಟೇ ಅಗಾಧವಾದ ಚಮತ್ಕೃತಿಗೆ ಕಾರಣವಾಗಿದ್ದರೂ, ಅದರಲ್ಲಿ ನಿರ್ಜೀವ ಜಗತ್ತಿನ ವ್ಯಾಪಾರವೂ ಅಷ್ಟೇ ಅಗಾಧವಾಗಿದೆ. ಇಲ್ಲವೆ ಅದಕ್ಕೂ ಮಿಗಿಲಾಗಿರಬಹುದು. ಅವು ಜಡ ಜಗತ್ತಿನ ಅಂಶಗಳೆಂದೆನಿಸಿಕೊಂಡರೂ, ಅವಕ್ಕೆ ಸ್ವಂತ ಮನಸ್ಸಿಲ್ಲ ಎಂಬುದು ನಿಜವಾದರೂ, ಆ ಜಡಜಗತ್ತನ್ನೂ, ಮಾನವ ಕುಲವನ್ನೂ ಕುಣಿಸುತ್ತವೆ—ಆ ಶಕ್ತಿಗಳು. ಇಂಥ ಚೈತನ್ಯಗಳ ಮೇಲೆ ಮಾನವನ ಹತೋಟಿಯೆಂಬುದಿಲ್ಲ. ಯಾವುದಾದರೊಂದು ದಿನ, ತಾರೆಗಳ ಪಥದಲ್ಲಿ ಬದಲಾವಣೆಯಾದರೆ, ಈ ನಮ್ಮ ಭೂಮಿಯು ಅರೆ ನಿಮಿಷದಲ್ಲಿ ನಾಶವಾಗ ಬಹುದು. ಅಂಥ

ವಿಧ್ವಂಸಕ್ಕೆ ಕಾರಣವಾಗುವ ಶಕ್ತಿಗಳು ತಾರೆಗಳ ರಾಜ್ಯಕ್ಕೆ ಸೇರಿದುವು. ನಮ್ಮ ಅಳವಿಗೆ ಮೀರಿದುವು. ಇವೆಲ್ಲವನ್ನೂ ಎಣಿಸಿಕೊಂಡರೆ—ಮಹಾ ಸಮರವೊಂದರಲ್ಲಿ ಭಾಗಿಯಾಗುವ ಸಾಮಾನ್ಯ ಸಿಪಾಯಿಗಿಂತಲೂ ಕಡೆ ಮನುಷ್ಯ ವ್ಯಕ್ತಿ. ಕಳೆದ ಮಹಾಸಮರದ ವಿಷಯವನ್ನೇ ನೆನೆದು ಯೋಚಿಸುವ. ಸಾಮಾನ್ಯ ಸೈನಿಕನಿಗೆ ಹಿಟ್ಲರನ ಇಲ್ಲವೆ ಚರ್ಚಿಲ್ಲನ, ಸ್ಟೇಲಿನನ ಯುದ್ಧನೀತಿಯ ಪರವೆಯಾದರೂ ಉಂಟಾಗಬಹುದೇನು? ತಾನೇ ಸೇರಿಕೊಂಡಿರುವ ಪಡೆಗಳ ಗಮನ, ನಿರ್ಗಮನಗಳನ್ನು ಅವನು ಎಣಿಸಬಲ್ಲನೆ? ಅವನ ಮಿತ ಜೀವನಲ್ಲಿ ತನ್ನ ಪಾಲಿಗೆ ಬಂದ ಕೆಲಸವನ್ನು ಅವನು ನಿರ್ಧರಿಸಬಹುದೇ ಹೊರತು, ಮಹಾ ಯುದ್ಧದ ವಿವಿಧ ರೂಪಿ ಚಲನೆಗಳನ್ನು ಅವನು ನಿರ್ಣಯಿಸಲಾರ. ಈ ಜೀವನ ಪ್ರವಾಹವು ಈ ಸಮರಕ್ಕಿಂತ ದೊಡ್ಡದಾದ, ಭವ್ಯವಾದ, ಮತ್ತು ವಿಸ್ಮಯಕರವಾದ ಪ್ರಶ್ನೆ. ಇಲ್ಲಿ ಪಾತ್ರ ವಹಿಸುತ್ತಿರುವ ಅದೆಷ್ಟೋ ಶಕ್ತಿಗಳ ತಿಳಿವೂ, ಸಂಪರ್ಕವೂ ಮನುಷ್ಯ ವ್ಯಕ್ತಿಗಾಗುತ್ತಲಿಲ್ಲ. ಅವನ ಪರಿಚಿತ ಪ್ರಪಂಚದಲ್ಲೂ, ಒಂದು ಜೀವಿಯ ಹೇತು ಇನ್ನೊಂದು ಜಾತಿಯ ಜೀವಿಗೆ ತಿಳಿದಿರುವುದಿಲ್ಲ. ಹುಲಿಯ ಬಾಳ್ವೆಯ ಹೇತು ಹೋತಕ್ಕೆ ತಿಳಿಯದು. ಹೋತದ ಜೀವನದ ಹೇತು ಹುಲಿಗೆ ತಿಳಿಯದು. ಹುಲಿ ಏಕೆ ಬದುಕಿದೆ-ಎಂದು ಮನುಷ್ಯ ತಿಳಿಯಲಾರ. ಅವವುಗಳಲ್ಲಿ ನಿಕಟ ಪರಿಚಿತಿಗೆ ಬೇಕಾದ ನುಡಿ ಇಲ್ಲ; ಆತ್ಮೀಯತೆಯಿಲ್ಲ.

### ನಾಳಿನ ಬದುಕಿನ ಅರಿವು

ವಿಶ್ವ ಜೀವನದ ಉದ್ದೇಶವನ್ನು ತಿಳಿಯಲು ಹಂಬಲಿಸುವ ವ್ಯಕ್ತಿ, ಮಿಕ್ಕ ಜೀವಿಗಳೊಡನೆ ಸ್ನೇಹ ಸಂಪರ್ಕಗಳನ್ನು ಬೆಳೆಯಿಸಿಕೊಂಡಿರಬೇಕು. ತನಗೆ ಉಪಯುಕ್ತವಾಗಿರಲಿ ಹಾನಿಕಾರಿಯಾಗಲಿ-ಎಲ್ಲ ತೆರನ ಜೀವಿಗಳ ರೀತಿ, ಬಯಕೆ, ಸುಖ ದುಃಖಗಳನ್ನು ತಿಳಿಯಬೇಕು. ವ್ಯಕ್ತಿಯಾದವನು, ಬರಿಯ ತನ್ನೊಬ್ಬನ ಬದುಕಿನ ಉದ್ದೇಶವನ್ನು ತಿಳಿಯಬೇಕಾದರೂ ಈ ಬಗೆಯ ನೋಟ ತೀರ ಆವಶ್ಯಕ. ತನ್ನ ಬದುಕಿನೊಡನೆ ಹೊಂದಿರುವ ಇತರ ಜೀವಕೋಟಿಗಳಲ್ಲಿ ಸಾಧ್ಯವಾದಷ್ಟು ಸಮರಸತೆಯಿಂದ ಬೆರೆತು, ಅವುಗಳ ಹಿತಾಹಿತವನ್ನು ಚಿಂತಿಸುವಷ್ಟು ಸಾಹಸತೋರಿಸಬೇಕು. ಹಾಗೆ ಯತ್ನಿಸಿದಲ್ಲಿ ತನ್ನ ಸುತ್ತಲಿನ ಬದುಕಿನ ತೀರ ಕೊನೆಯ ಹಂತವು ತಿಳಿಯದೆ ಹೋದರೂ, ಇಂದಿನ ಬಾಳ್ವೆಗೆ ತಗಲಿಕೊಂಡಿರುವ ನಾಳಿನ ಬದುಕಿನ ಅರಿವಾದರೂ

ನಮಗಾದೀತು. ಉಳಿದೆಲ್ಲ ಜಗತ್ತು ಮಿಥ್ಯವೆಂದು ಸಾರುವ ವ್ಯಕ್ತಿಗೆ, ಇಷ್ಟು ಮಿತವಾದ ರಹಸ್ಯವೂ ತಿಳಿಯಲಾರದು.

ಈಗ ನಾವು ಪ್ರಪಂಚದ ಕಟ್ಟಕಡೆಯ ಗುರಿಯ ವಿಚಾರವಾಗಿ ಯೋಚಿಸುವ. ಹಿಂದೆ ಹೇಳಿದ ರೀತಿಯಲ್ಲಿಯೇ ಒಬ್ಬ ವ್ಯಕ್ತಿಯು ಜೀವನ ಪ್ರವಾಹದೊಡನೆ ಬೆರೆಯುತ್ತಾನೆ-ಎನ್ನುವ. ಆಗಲೂ ಅದನ್ನು ತಿಳಿಯಲು ಬಂದೀತೇ?

**ಕಾಣಲಾರದ ದೂರ**

ಈ ಕಾರಣ ಒಂದರಿಂದಲೇ ಅಲ್ಲ-ನಮ್ಮ ಭೂಮಿಯಲ್ಲಿ ಜೀವಗಳು ಕಾಣಿಸಿಕೊಂಡು ಎಷ್ಟೋ ಕೋಟಿಗಟ್ಟಲೆ (೩,೦೦೦,೦೦೦,೦೦೦) ವರ್ಷಗಳಾದುವೆಂದು ವಿಜ್ಞಾನಿಗಳು ಹೇಳುತ್ತಾರೆ. ಆ ಜೀವನದ ವಿಕಾಸದಲ್ಲಿ ಮನುಷ್ಯ ಕಾಣಿಸಿಕೊಳ್ಳುವುದಕ್ಕೇನೆ ಐನೂರು ಮಿಲಿಯ ವರ್ಷ ಹಿಡಿದಿರಬಹುದು. ಭೂಮಿಯ ಜೀವನದ ಹುಟ್ಟಿನ ಪ್ರಥಮ ದಿನದಲ್ಲಿ ಇದ್ದ ಯಾವುದಾದರೊಂದು ಜೀವಿಯು ತನ್ನಿಂದ ಮುಂದೆ ೫೦೦,೦೦೦,೦೦೦ ವರ್ಷಗಳ ಅನಂತರ ಮನುಷ್ಯ ಜೀವಿ ಹುಟ್ಟುತ್ತಾನೆ-ಎಂದು ತೀರ್ಮಾನಿಸುವುದು ಸಾಧ್ಯವೇ? ಅದರಷ್ಟೇ ನಿಷ್ಫಲವಾದ ಪ್ರಶ್ನೆ-ಇಂದಿನ ಮಾನವನದು; ನಾಳೆ ಲಕ್ಷಾವಧಿ ವರ್ಷಗಳ ಬಳಿಕ ಪ್ರಪಂಚ ಹೇಗಿದ್ದೀತು ಎಂದು ಕೇಳುವ ಪ್ರಶ್ನೆ. ಮೊನ್ನಿನ ಜೀವನ ನಿನ್ನೆಯದಕ್ಕೆ ಎಡೆಮಾಡಿಕೊಟ್ಟಿತು. ನಿನ್ನಿನದು ಇಂದಿನ ರೂಪಕ್ಕೆ ಕಾರಣ. ಇಂದಿನದು ನಾಳೆಯ ಬದುಕಿಗೆ ನೆರವು. ನಾಳಿನದು ನಾಡಿದ್ದಿಗೆ. ಇಂದಿನ ಸ್ಥಿತಿಯನ್ನು ಕಂಡು, ಒಂದೆರಡು ನಾಳೆಗಳ ತನಕ ಜೀವನ ಹೇಗಿರಬಹುದು-ಎಂದು ಊಹಿಸಬಹುದು. ಬಹು ನಾಳೆಗಳ ಆಚೆ ಏನಾಗುವುದೆಂದು ಹೇಳಲು ಶಕ್ಯವೇ? ಈ ಒಂದೊಂದು ನಿನ್ನೆಯನ್ನೂ ಒಂದೊಂದು ನಾಳೆಯನ್ನೂ ಕೋಟಿ ವರ್ಷಗಳ ಅಳತೆಯಲ್ಲಿ ಅಳೆಯಬೇಕಾದ ಪ್ರಸಂಗವಿರುವಾಗ, ತೀರ ನಾಳಿನ ಆಚೆ ಜೀವನ ಹೇಗಿದ್ದೀತು? ಹೇಗೆ ಕೊನೆಗೊಂಡೀತು —ಎಂಬ ಪ್ರಶ್ನೆ ನಮ್ಮ ಅಳತೆಗೆ ಮೀರಿದ್ದಲ್ಲವೆ! ಮಾತ್ರವಲ್ಲ-ಅದು ಸಿದ್ಧಾಂತವಾಗಿ ಮಾಡಿಟ್ಟ ತೀರ್ಮಾನವಲ್ಲ. ನಿಸರ್ಗವೇ ತನ್ನ ನಾಳಿನ ಬದುಕನ್ನು ಊಹಿಸಬಲ್ಲ ಶಕ್ತಿ. ಅದರ ಮುಂದಿನ ದಿನದ ದಿಕ್ಕನ್ನು ಅದೇ ಅರಸಬಹುದು. ಅಷ್ಟನ್ನು ಬಿಟ್ಟು ಮತ್ತೂ ಆಚಿನದನ್ನು ಅದೇ ತಿಳಿದಿರದು. ಪ್ರಪಂಚವು -ಕಾಲಮಾನದ ವಿಸ್ತೃತ ಪಥದಲ್ಲಿ ಒಂದು ಬರಿಯ ಬಿಂದುವಾಗಿದೆ. ಅದರ

ಹೆಜ್ಜೆಯ ಜಾಡು ಬರಿಯ ನಿನ್ನೆ ಮೊನ್ನೆನ ತನಕದ್ದು. ಅಷ್ಟೊಂದು ಅದಕ್ಕೆ ಗೋಚರಿಸಬಹುದು. ನಾಳಿನ ದಾರಿಯ ಒಲವನ್ನು ತುಸುವೇ ಮುಂದು ವರಿಸಿ, ಅದು ಹೇಗೆ ಸಾಗೀತು, ಎಂದು ಊಹಿಸಬಹುದು. ಆದರೆ ಬಹು ಆಚಿನ ನಾಳೆಯೆಂಬುದು, ಆ ಅನಂತ ಪಥದಲ್ಲಿ ಇನ್ನೂ ರೂಪಿತವಾಗಬೇಕು. ಎಷ್ಟೋ ನಾಳೆಗಳ ಚರ್ಯೆಗಳಿಂದ ಅದು ನಿರ್ಧಾರಗೊಳ್ಳಬೇಕು.

**ಜೀವನದ ಗುರಿ**

ಒಟ್ಟು ಜೀವದ ಗುರಿಯೇನು ಎಂಬುದು ತೀರ ವಿಚಿತ್ರವಾದೊಂದು ಸಮಸ್ಯೆ. ಅದರಲ್ಲಿ ವ್ಯಕ್ತಿ ಎಲ್ಲಿಗೆ ಹೋಗಿ ಮುಟ್ಟುತ್ತಾನೆ-ಅಥವಾ ಒಟ್ಟು ಜೀವನ ಎಲ್ಲಿಗೆ ಹೋಗಿ ಮುಟ್ಟುತ್ತದೆ—ಎಂಬುದು ಮಾಡಿಟ್ಟ ನಿರ್ಧಾರವಲ್ಲ. ಬಹುದೂರದ ನಾಳೆಯ ಗುರಿಯನ್ನು ತಿಳಿಯಲು ನಮ್ಮ ಶಕ್ತಿ ಸಾಲದು-ಎಂದಿಷ್ಟೇ ಹೇಳಬಹುದು. ಆ ದಾರಿಯನ್ನು ಬಿಡುವ. ಆಗಲೂ-ನಮ್ಮ ಬದುಕು ಹಿಂದೆ ನಡೆದುದರ ಪುನರಾವರ್ತನೆ ಎಂದು ನಾವು ತೀರ್ಮಾನಿಸು ವಂತಿಲ್ಲ. ಅದು ಯಂತ್ರವೊಂದರ ಗಾಲಿಯಂತೆ ತಿರುಗಿ ತಿರುಗಿ ಹೊರಟ ಸ್ಥಾನಕ್ಕೆ ಬರುವುದು ಕಾಣಿಸದು. ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಒಂದು ಘಟನೆಯಂತೆ, ಇನ್ನೊಂದು ಘಟನೆಯಿಲ್ಲ. ಒಂದು ಜೀವದಂತೆ ಇನ್ನೊಂದು ಜೀವವಿಲ್ಲ. ಒಂದು ದಿವಸದಂತೆ ಇನ್ನೊಂದು ದಿನವಿಲ್ಲ. ನಿನ್ನಿನಂತೆ ಇಂದು ಕಂಡರೂ, ನಿನ್ನೆ ಬೇರೆ, ಇಂದು ಬೇರೆ ಎಂಬಷ್ಟು ವ್ಯತ್ಯಾಸದಿಂದ ಕೂಡಿದ ಬಾಳು ನಮ್ಮದು. ತೀರ ಹತ್ತಿರದಿಂದ ನೋಡುವಾಗ ವ್ಯತ್ಯಾಸಕ್ಕಿಂತಲೂ ಸಾಮ್ಯವೇ ಹೆಚ್ಚಾಗಿ ಕಾಣಿಸುತ್ತದೆ. ಅವುಗಳಲ್ಲಿನ ಪ್ರತ್ಯೇಕತೆ, ನಾವೀನ್ಯ ನಮಗೆ ಕಾಣಿಸದೆ ಹೋಗಬಹುದು. ಆದರೆ ಬಹು ಹಿಂದಿನ ದಿನದೊಡನೆ 'ಇಂದ'ನ್ನು ಹೋಲಿಸಿದಾಗ, ಜೀವನದ ದಾರಿ ತುಸು ತುಸುವಾಗಿ ಬದಲಿಸಿ, ಹೆಚ್ಚಿನ ವ್ಯತ್ಯಾಸ ಪಡೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಯುಗಮಾನ ಗಳ ಅಳತೆಯಿಂದ ಸಾಗುವ ಈ ಜೀವನ ಪ್ರವಾಹದಲ್ಲಿ ವ್ಯತ್ಯಾಸ ಕಾಣಿಸ ಬೇಕಾದರೆ, ಮನುಷ್ಯಮಾನದ ಅಳತೆಯ ಕೋಲು ಸಾಲದಾಗುತ್ತದೆ. ವಿಸ್ತೃತವಾದ ಜೀವ ಜೀವಿಗಳ ವಿಕಾಸ, ಐತಿಹಾಸಿಕ ಪರಿವರ್ತನೆ, ಸಂಸ್ಕೃತಿ, ನಾಗರಿಕತೆಗಳ ಹುಟ್ಟು ಸಾವುಗಳ ವಿಸ್ತಾರ ಕ್ಷೇತ್ರವನ್ನು ನಾವು ನಿಲುಕಿ ನೋಡಿದಾಗ ಮಾತ್ರ, ಬಂದಿರುವ, ಆಗಿರುವ ವ್ಯತ್ಯಾಸಗಳು, ಉನ್ನತಿ, ಅವನತಿಗಳು – ನಮಗೆ ಹೊಳೆದಾವು. ಆ ಮಾನದಿಂದ ಅಳೆದಲ್ಲಿ, ಜೀವನದ

ಗುರಿ ಪೂರ್ಣವಾಗುವುದಕ್ಕೊ, ಮಾನವನು ತನ್ನ ವ್ಯಕ್ತಿಪೂರ್ಣತೆಯನ್ನು ಹೊಂದುವುದಕ್ಕೋ ಯುಗಮಾನಗಳ ಪಯಣ ಬೇಕಾಗುವಂತೆ ತೋರುತ್ತದೆ. ನಮ್ಮ ಮಿತ ಆಯುಷ್ಯದ ಅಳತೆ, ಶಕ್ತಿಗಳ ನಿಲುಕಿಗೆ ಅದು ದೂರವಾದುದು. ನಿಲುಕಿಗೆ ಸಿಗುವಷ್ಟನ್ನೆಲ್ಲ ತಿಳಿದು, ಅದರಿಂದ ಪರಿವರ್ತನೆಗೊಂಡು, ತುಸುವೇ ಮುಂದವರಿಯಬಹುದಾದ ನಾವು, ಅಷ್ಟನ್ನೇ ಮಾಡಬೇಕು. ಅದಕ್ಕೂ ಮುಂದೆ ಚಾಚುವ ಕೈಯು ಚಂದ್ರನನ್ನು ಹಿಡಿಯಲು ಹೊರಟ ಕೈಯಂತೆಯೇ ಸರಿ.

**ಇಂದು ದೊಡ್ಡದು**

ಕಟ್ಟಕೊನೆಯ ಗುರಿಯನ್ನು ಸೇರಿದರೇನೆ ಸುಖ ಎಂಬುದು ಅಲ್ಪಾಯುವಾದ ಮನುಷ್ಯನು–ತನ್ನ ನಿತ್ಯ ಲಾಭ, ಹಾನಿ, ಕಷ್ಟಗಳ ಮೇಲಿಂದ ಕಟ್ಟಿರುವ ಆಸೆಯಾಗಿದೆ. ಇದಕ್ಕಿಂತಲೂ–ಜೀವನವನ್ನು ಪ್ರಜ್ಞಾಪೂರ್ಣವಾಗಿ ನಡೆಸುವ ಚೈತನ್ಯಮಯ ಬಾಳ್ವೆಯೇ ನಮಗೆ ಹೆಚ್ಚಿನ ಆದರ್ಶವಾಗಬಾರದೇಕೆ? ನಾಳಿನ ವಿಶ್ರಾಂತಿಗಿಂತ ಇಂದಿನ ಬದುಕೇ ನಮಗೆ ಹಿರಿದೆನಿಸಬಾರದೇಕೆ? ನಾಳೆ ಏನೂ ಮಾಡದೆ ಇರುವ, ಏನೂ ಆಗದೆ ಇರುವ ದಿನಕ್ಕಿಂತ ಇಂದು ಏನೂ ಆಗುವ, ಏನೂ ಮಾಡುತ್ತಿರುವ ದಿನ ಹಿರಿಯದೆಂದು ತಿಳಿಯಬಾರದೇಕೆ? ನಾಳೆ ಏನೆಂಬ ಪ್ರಶ್ನೆಗಿಂತಲೂ 'ಇಂದು ಹೇಗೆ' ಎನ್ನುವ ಪ್ರಶ್ನೆ ನಮಗೆ ಮಹತ್ತರವಾಗಿ ಕಾಣಿಸಬೇಕು. ಬದಲು ವಿಶ್ವದ ಹೊಣೆಯನ್ನೋ, ವಿಶ್ವದ ಗುರಿಯನ್ನೋ ಕಾಣಬಯಸುವ ಕೆಲಸ. ಅಸಾಧ್ಯ ಗೋಷ್ಠಿ, ಅಧಿಕ ಪ್ರಸಂಗಗಳಲ್ಲವೆ? ಆ ರೀತಿ ಬಾಳ್ವೆಗೆ ಭೂಷಣವೆಂದು ನನಗನಿಸುವುದಿಲ್ಲ. ಇಂದು ನಮಗೆ ದೊಡ್ಡದು. ಇಂದಿನ ಬದುಕು ಅಷ್ಟೇ ದೊಡ್ಡದು. ಅದು ನಿನ್ನೆಗೂ ನಾಳೆಗೂ ಕಡಮೆಯಾಗದಷ್ಟು, ಎಂದೂ ಕಡಮೆ ಎನಿಸದಷ್ಟು ದೊಡ್ಡದು. ಅದು ಊಹೆ, ತರ್ಕ, ವಿರಕ್ತಿಯ ನೀತಿಗಳಿಂದ ತೀರ್ಮಾನಗೊಳ್ಳಲಾರದು. ತನಗೂ ಮೀರಿದ ಪ್ರಶ್ನೆಗಳನ್ನು ಮನುಷ್ಯ ಬದುಕಿಗೆ ಅಂಟಿಸಿಕೊಂಡು, ತಾನೇ ಕಲ್ಪಿಸಿದ ಭೂತಕ್ಕೆ ಬೆದರಿ, ಜೀವನದಿಂದ ಪಲಾಯನ ಮೆಸಗುವುದು ಬದುಕಿನ ಹಾದಿಯಲ್ಲ. ಜೀವನವನ್ನೆಲ್ಲ ಮಾಯೆ ಎಂದು ಅಲ್ಲಗಳೆದು ಸಾಗುವವರನ್ನು ಜೀವನ ಪ್ರವಾಹ ಮರೆತೇ ಮುಂದೆ ಸಾಗುತ್ತದೆ. ಒಬ್ಬ ವ್ಯಕ್ತಿಯು ತನ್ನ ಬದುಕನ್ನು ಜೀವನ ಪ್ರವಾಹಕ್ಕೆ ಬರಡಾಗಿ ಮಾಡಿಕೊಂಡಲ್ಲಿ, ಅವನ ಆಯುಷ್ಯ ಬರಡಾದೀತೇ ವಿನಾ, ಜೀವನ

ಪ್ರವಾಹ ಬರಡಾಗಲಾರದು. ಈ ತೆರನ ಲಕ್ಷೋಪ ಲಕ್ಷ ಜೀವಿಗಳ ಹಾನಿ ಗಳನ್ನು ಸಹಿಸಿ, ಮುಂದೆ ಸಾಗುವ ಭರ, ಮಹತಿಗಳು ಅದರಲ್ಲಿವೆ. ಮನುಷ್ಯ ಮರವಾಗಬಾರದು. "ಮರ"ಕ್ಕಿಂತ ಭಿನ್ನವಾದ ಚಟುವಟಿಕೆ, ಶಕ್ತಿಗಳನ್ನು ಗಳಿಸಬೇಕಾದವನು ಮಾನವ. ಆತ ಎಷ್ಟು "ಚರ"ನಾಗಬಹುದೋ ಅಷ್ಟು ಚರನಾಗಬೇಕು.

**ಬಾಳ್ವೆ ಬದುಕುವುದಕ್ಕೆ**

ಬಾಳ್ವೆಯಿರುವುದೇ ಬದುಕುವುದಕ್ಕಾಗಿ; ಬದುಕಿನಿಂದ ಬೆಳೆಯುವು ದಕ್ಕಾಗಿ. ಮಳೆಯಾಗಿ ಉದುರಿದ ಹನಿಗಳು ಅಲ್ಪವಾಗಿರಬಹುದು. ಆ ಹನಿ ಗಳು ನೆಲದಲ್ಲಿ ಬಿದ್ದು ಹುದುಗಿ ಹೋಗುವ ಅವುಗಳ ಆಟ ಕ್ಷಣಿಕವಾಗಿಯೂ ತೋರಬಹುದು. ಜೀವನ ಪ್ರವಾಹದಲ್ಲಿ ಹುಟ್ಟಿ, ಸಾಯುವ ಪ್ರತಿಯೊಂದು ಜೀವಿಯೂ ಹೀಗೆ ಕ್ಷಣಿಕವೂ ಅಲ್ಪವೂ ಅಹುದು. ಆದರೆ ಅಂಥ ಹನಿಗಳೇ ನೆಲವನ್ನೊಡೆದು ಬರುವ ಬುಗ್ಗೆಗಳಾಗುತ್ತವೆ. ಅವು ಜಿನುಗಬೇಕು, ಹಂಬಲಿಸಿ ಹರಿಯಬೇಕು. ನದಿಯಾಗಿ ಹಿಗ್ಗಿ, ವಿಸ್ತರಿಸಿ, ತೊಡರುಗಳನ್ನು ಕೊಚ್ಚಿ ಮುಂದಕ್ಕೆ ಸಾಗಬೇಕು. ಬೀಳುವ ಮಳೆಯ ಹನಿಗೆ ನಾಳಿನ ನದಿಯ ಕಲ್ಪನೆಯಾಗದಾದರೂ, ಆ ನದಿಗೆ ಅಂಥ ಹನಿಗಳೇ ಕಾರಣ.

**ದುಃಖವೂ ತಿಳಿವಿಗೆ ಕಾರಣ**

ಜೀವನ ಕ್ಷಣಿಕವಾಗಿದ್ದರೆ ಏನು ಕೆಟ್ಟಿತಂತೆ? ನಮ್ಮ ಸುತ್ತಲಿನ ಎಲ್ಲ ಕ್ಷಣಿಕ ವಸ್ತುಗಳಂತೆಯೇ ನಾವಿದ್ದೇವೆ; ಹೆಚ್ಚೂ ಅಲ್ಲ; ಕಡಮೆಯೂ ಅಲ್ಲ. ಆ ಕ್ಷಣಕ್ಕೂ ಮೀರಿ ಬದುಕಬೇಕೆಂಬ ಅತ್ಯಾಸೆ ನಮಗೆ ಬೇಕಿಲ್ಲ. ಈ ಕ್ಷಣ ಕಾಲದ ಚೈತನ್ಯಕ್ಕೆ ಆಳಾಗುವುದು ಮೊದಲಿನ ಕೆಲಸ; ದೂರದ ನಾಳೆಗಾಗಿ ಹಂಬಲಿಸುವುದು ಮತ್ತಿನ ಕೆಲಸ. ಬಾಳ್ವೆಯಿರುವಷ್ಟು ದಿನ ಅದರ ಅರಿವು ಆಗಲಿ; ಜೀವನದ ಸೊಗಸು, ಕೊರತೆಗಳ ಅನುಭವವಾಗಲಿ. ಅದರಿಂದ ನಮ್ಮ ಮನಸ್ಸು ವಿಸ್ತರಿಸಲಿ. ಪ್ರತಿಕ್ಷಣವೂ ನಮ್ಮ ಸುತ್ತಲೂ ನಡೆಯುವ ಕದನ, ಸ್ನೇಹ, ಸಂಧಾನಗಳು ಅವುಗಳ ಉದ್ದೇಶಗಳನ್ನು ನಮಗೆ ಪರಿಚಯ ಮಾಡಿಕೊಡಲಿ. ನಮ್ಮ ಮನಸ್ಸು ತೆರೆದಿರುವಲ್ಲಿ ಒಂದೊಂದು ಸಾವು, ಒಂದೊಂದು ನೋವು, ಬವಣೆಗಳೂ, ಒಂದೊಂದು ಹಿಗ್ಗು, ಒಂದೊಂದು ಆನಂದ, ಒಂದೊಂದು ಸುಖಗಳಷ್ಟೇ ಅರಿವನ್ನು ಕೊಟ್ಟಾವು. ಬಾಳ್ವೆಯಲ್ಲಿ ನಮ್ಮ ಜೀವನ ಇತರ ಜೀವಗಳೊಡನೆ ಎಷ್ಟು ಹೆಚ್ಚಾಗಿ ಹೊಂದಿಕೊಳ್ಳು

ತ್ತದೋ ಅಷ್ಟಷ್ಟು ಹೆಚ್ಚಾಗಿ ನಮ್ಮ ಬದುಕು ಪಕ್ವವಾಗುತ್ತದೆ; ಸವಿಯಾಗುತ್ತದೆ. ಉಳಿದ ಜಗತ್ತಿನ ಬಾಳ್ವೆಗೂ ಅದು ಸೊಗಸನ್ನು ಉಂಟುಮಾಡುತ್ತದೆ.

ಬದುಕು ಏನೆಲ್ಲ ನಮಗೆ ಕೊಟ್ಟಿರಲಾರದು? ಏನೆಲ್ಲ ನಮಗೆ ಕೊಡಲಾರದು? ಅನುಭವಿಸುವ ನಮ್ಮ ಶಕ್ತಿಗಳು ಎಷ್ಟು ಸೂಕ್ಷ್ಮವಾಗುತ್ತವೋ ಪರಿಶೀಲನೆಯ ನಮ್ಮ ನೋಟ ಎಷ್ಟೆಷ್ಟು ವೊನಚಾಗುತ್ತದೆಯೋ, ಇತರರ ಜೀವನದಲ್ಲಿ ನಮ್ಮ ಹೃದಯ ಎಷ್ಟೆಷ್ಟು ವಿಸ್ತೃತವಾಗಿ ಬೆರೆಯುತ್ತದೆಯೋ, ಅಷ್ಟಷ್ಟು ಹಿರಿದಾದ ಸುಗ್ಗಿ ನಮ್ಮ ಬದುಕಿನ ಬೆಳೆಗೆ ದೊರಕೀತು.



## ೧೧. ವಿಸ್ತೃತ ಜೀವನ

### ಇಂದ್ರಿಯಗಳ ಪಾತ್ರ

ಬಾಳ್ವೆಯ ಮಹತ್ವವನ್ನು ಬದುಕಿಯೇ ತಿಳಿಯಬೇಕಲ್ಲದೆ ಅನ್ಯಥಃ ತಿಳಿಯದು. ಬಾಳ್ವೆ ಇರುವುದೇ ಬದುಕುವುದಕ್ಕಾಗಿ. ಅದರ ನಿರಾಕರಣೆ ಬಾಳ್ವೆಗೆ ಸಲಿಸುವ ಉತ್ತರವಲ್ಲ. ಹೀಗೆಂದ ಬಳಿಕ ಬಾಳ್ವೆಯ ಸೊಗಸನ್ನು ಅರಿಯಬೇಕಾದ ವ್ಯಕ್ತಿಯು, ತನ್ನ ಜೀವನ ಎಷ್ಟು ತುಂಬಿ, ವಿಶಾಲವಾಗಿ ಹಿಗ್ಗಬಹುದೋ ಅಷ್ಟೊಂದು ತುಂಬು ಜೀವನವನ್ನು ಮಾಡಬೇಕು. ಅಂಥ ವ್ಯಕ್ತಿಯು ಆ ಉದ್ದೇಶವನ್ನು ಹೇಗೆ ಸಾಧಿಸಲು ಸಾಧ್ಯ? ಅವನು ಎಷ್ಟು ಹೆಚ್ಚಾಗಿ ಪ್ರಪಂಚದ ಜೀವಿ, ಜೀವೇತರ ವಸ್ತುಗಳೊಡನೆ ಬೆರೆಯಲು ಪ್ರಯತ್ನಿಸುತ್ತಾನೆಯೋ, ಎಷ್ಟೊಂದು ಅಧಿಕ ಪ್ರಮಾಣದಲ್ಲಿ ಪ್ರಪಂಚದ ಬಾಳ್ವೆಯೊಡನೆ ತನ್ನ ಸುಖ ದುಃಖಗಳನ್ನು ಹೊಂದಿಸಿಕೊಳ್ಳಲು ಶಕ್ತನಾಗುತ್ತಾನೆಯೋ, ಅಷ್ಟಷ್ಟು ತುಂಬಿದ ಜೀವನ ಅವನದಾಗುತ್ತದೆ. ಮನುಷ್ಯನಿಗೆ ಪ್ರಪಂಚದ ಪರಿಚಯವಾಗುವುದಾಗಲಿ, ಅದರೊಡನೆ ಅವನು ತನ್ಮಯತೆ ಹೊಂದುವುದಾಗಲಿ, ಅವನ ಇಂದ್ರಿಯಗಳಿಂದ ಆಗಬೇಕಾದ ಕೆಲಸಗಳು. ಮನುಷ್ಯನ ವಿಚಾರದಲ್ಲಿ ಹೀಗೆನ್ನಬಹುದು—ಅವನ ಕಣ್ಣುಗಳು ಇಲ್ಲಿ ಕಾಣಬಹುದಾದಷ್ಟು ಸೊಗಸನ್ನು ಕಾಣಬೇಕು; ಬದುಕಿಗೆ ಒಪ್ಪುವ ಚೆಲುವಾವುದು, ಒಪ್ಪದ ಚೆಲುವಾವುದು—ಎಂಬುದನ್ನು ಅವನ ನೋಟ ತಿಳಿಸಬೇಕು. ಆ ಪರಿಪಾಕ, ಸೂಕ್ಷ್ಮತೆ, ಆಯ್ಕೆ ಅವನ ಕಣ್ಣಿಗಿಲ್ಲದೆಹೋದರೆ, ಅವನ ಕಣ್ಣು ಕೊಡಬಹುದಾದ ಅನುಭವಗಳು ಅಷ್ಟರ ಮಟ್ಟಿಗೆ ಬಡವಾಗುತ್ತವೆ. ಅವನ ಕಿವಿ—ಪ್ರಪಂಚದ ಧ್ವನಿ, ನಾದ, ಶಬ್ದ, ಗಲಭೆ, ಆರ್ಭಟೆ, ಚೀರಾಟಗಳಿಂದ ತನ್ನ ಜ್ಞಾನವನ್ನು ಗಳಿಸಬೇಕು. ಯಾವುದರಿಂದ ತಾನು, ತನ್ನವರು ಹಿತ ಪಡೆಯಬಹುದು, ಯಾವುದು ಜೀವಿಗೆ ಉಲ್ಲಾಸಕಾರಿಯಾದುದು, ಯಾವುದು ಮನಸ್ಸನ್ನು ಮೇಲಕ್ಕೆತ್ತಬಲ್ಲುದು, ಯಾವೆಲ್ಲ ಸ್ವರರಾಜಿಗಳು ಬದುಕಿನ ವಿರಸವನ್ನು ಸೂಚಿಸುತ್ತವೆ, ಯಾವುವು ಜೀವನ ಸುಖಕ್ಕೆ ಶ್ರುತಿ, ಯಾವುವು ಅಪಶ್ರುತಿ-ಎಂಬುದನ್ನೆಲ್ಲ ತಿಳಿಯಬಲ್ಲ ಸೂಕ್ಷ್ಮತೆ ಕಿವಿಗಳಿಗೆ ಬರಬೇಕು.

## ಇಂದ್ರಿಯಗಳಿದ್ದರೆ ಮನಸ್ಸು

ಸುಖದುಃಖಗಳ ಅನುಭವವನ್ನು ವ್ಯಕ್ತಿಗೆ ದೊರಕಿಸುವ ಸ್ಪರ್ಶೇಂದ್ರಿಯಗಳು, ರಸ ಆಸ್ವಾದನೆಗೆ ಕಾರಣವಾದ ಜಿಹ್ವೆ, ವಿವಿಧ ವಾಸನೆಗಳನ್ನು ತಿಳಿಸುವ ಮೂಗು—ಇವೆಲ್ಲವೂ ತಂತಮ್ಮ ಕ್ಷೇತ್ರಗಳಲ್ಲಿ ಪಳಗಬೇಕು.

ಸಂಸಾರದ ಅನೇಕ ಘಟನೆಗಳು ನಿಸರ್ಗದ, ಅನೇಕ ದರ್ಶನಗಳು, ಜೀವನದ ಅನೇಕ ಸ್ನೇಹ, ಸೌಹಾರ್ದಗಳು ಇಂದ್ರಿಯಗಳ ಮೂಲಕವಾಗಿಯೆ ನಮಗೆ ದೊರೆಯಬೇಕು. ಮನಸ್ಸಿನ ತೆರೆಯ ಮೇಲೆ ಅವುಗಳು ಮೂಡಬೇಕು. ಹಾಗೆ ಮೂಡಿ, ತಕ್ಕುದಾದ ಪ್ರತಿಕ್ರಿಯೆಗಳನ್ನು ಉಂಟುಮಾಡಿ, ಮನಸ್ಸು ಪಕ್ವವಾಗಬೇಕು. ಇಂದ್ರಿಯಗಳು ಕೊಡುವ ಅನುಭವಗಳಿಂದಲೇ ಮನಸ್ಸು ಹಿಗ್ಗುತ್ತದೆ ಅಥವಾ ಕುಗ್ಗುತ್ತದೆ. ಮನಸ್ಸಿನ ಆ ಏರಿಳಿತಗಳನ್ನು ಹೊಂದಿ, ವ್ಯಕ್ತಿಯ ನಡೆನುಡಿಗಳು ಪರಿಣಾಮಗೊಳ್ಳುವುದರಿಂದ ವ್ಯಕ್ತಿಗೂ ಬಾಹ್ಯ ಜಗತ್ತಿಗೂ ಇರುವ ನಡವಳಿಕೆಯು ರೂಪಿತವಾಗುತ್ತದೆ. ಮನಸ್ಸಿನ ತೆರೆಯ ಮೇಲೆ ಬೀಳುವ ಅನೇಕ ಅನುಭವದ ಬಿಂಬಗಳು ಬರಿದೆ ಶೇಖರಗೊಳ್ಳಬೇಕೆಂದಿಲ್ಲ. ಅವು ಇನ್ನೂ ವಿಸ್ತಾರಗೊಳ್ಳಬಹುದು ಇಲ್ಲವೆ ಸಂಕೋಚಗೊಳ್ಳಬಹುದು. ಸದಾ ಚೇತನವಾಗಿ ಉಳಿಯಬಹುದು. ಅನುಭವಗಳ ಸಂಖ್ಯೆ ಅಧಿಕವಾದಂತೆ, ಅವುಗಳನ್ನು ಕೂಡಿಡುವ ಮನಸ್ಸು ನಿಸ್ವಾರ್ಥವಾದಂತೆ, ಮನೋರಾಜ್ಯದಲ್ಲಿ ಸ್ಥಾಪನೆಗೊಳ್ಳುವ ಬಿಂಬಗಳ ತೂಕ ಹೆಚ್ಚು ಕಡಿಮೆಯಾಗುತ್ತವೆ. ಅವುಗಳಲ್ಲಿ ಸಮತೋಲ ಉಂಟಾಗುತ್ತದೆ. ಹಾಗೆ ಉಂಟಾದಲ್ಲಿ ಮಾತ್ರ ವ್ಯಕ್ತಿಗೂ ಬಾಹ್ಯ ಜಗತ್ತಿಗೂ ಇರುವ ಸಂಬಂಧ ಸಮರಸವಾಗಿ ನಡೆದೀತು.

## ಕಣ್ಣು, ಕಿವಿ

ಮನಸ್ಸನ್ನು ಪಕ್ವಮಾಡುವುದರಲ್ಲಿ ಕಣ್ಣಿಗಿರುವಷ್ಟು ಹೆಚ್ಚಿನ ಹೊಣೆ ಇತರ ಇಂದ್ರಿಯಗಳಿಗಿಲ್ಲ; ಅನಂತರ ಸ್ಥಾನ ಕಿವಿಗೆ. ಬದುಕಿನ ಅನೇಕ ವಸ್ತುಗಳ ಪರಿಚಯ, ಘಟನೆಗಳ ಪರಿಚಯ ಕಣ್ಣಿನಿಂದಲೇ ಆಗಬೇಕು. ಮನಸ್ಸಿನ ತೆರೆ ಹಲವು ದೃಶ್ಯಬಿಂಬಗಳಿಂದ ತುಂಬಿಕೊಳ್ಳುತ್ತದೆ. ನಮ್ಮ ಕಣ್ಣಿಗೆ ಬೀಳುವ ಬರಹದಿಂದ, ನೂರಾರು ವ್ಯಕ್ತಿಗಳ ಅನುಭವ ಚಿತ್ರಗಳೂ ಆ ತೆರೆಯ ಮೇಲೆ ಬೀಳುತ್ತವೆ. ಧ್ವನಿರಾಜ್ಯ, ಕಿವಿಯ ಮೂಲಕ ಮನಸ್ಸಿನ ಮೇಲೆ ಕೆಡೆಯುವ ಅನುಭವಗಳು ಇಷ್ಟು ಹೆಚ್ಚಲ್ಲ. ಧ್ವನಿಗಳಲ್ಲಿ ಮುಖ್ಯವಾದ

ಮಾತು, ಬರಹದಂತೆಯೇ ಇತರರ ಅನುಭವಗಳನ್ನು ದೊರಕಿಸಿಕೊಡುತ್ತದೆ. ಒಲುಮೆ, ಪ್ರಣಯ, ಪ್ರೇಮ, ಭಕ್ತಿ, ವೈರಗಳಂಥ ಜೀವ ಜೀವಗಳನ್ನು ಸೆಳೆಯುವ ಇಲ್ಲವೆ ದೂರಮಾಡುವ ಶಕ್ತಿಗಳ ಪರಿಚಯ ನಮ್ಮ ಕಣ್ಣು ಕಿವಿಗಳಿಂದಾಗುವ ಕೆಲಸಗಳು.

**ನಿಸರ್ಗದ ಹಿನ್ನೆಲೆ**

ಜೀವನದಲ್ಲಿ ಕಣ್ಣುಗಳ ಪಾತ್ರ ಬಹಳ ಮಹತ್ವದ್ದು. ಅವು ಎಷ್ಟೆಲ್ಲ ವನ್ನು ಜೀವನಕ್ಕೆ ದೊರಕಿಸಿ ಕೊಡಬಹುದು ಎಂಬುದನ್ನು ಇನ್ನೂ ಸೂಕ್ಷ್ಮ ವಾಗಿ ವಿಚಾರಿಸುವ. ಎಲ್ಲ ಜೀವಿಗಳೂ ವಿಶಾಲವಾದ, ವಿವಿಧವಾದ ನಿಸರ್ಗದ ತೆರೆಯ ಮುಂದುಗಡೆ ತಮ್ಮ ಜೀವನ ನಾಟಕವನ್ನು ಅಭಿನಯಿಸುತ್ತವೆ. ಬಯಲು, ಆಕಾಶ, ಮುಗಿಲು, ನದಿ, ಕಡಲು ಇವುಗಳೆಲ್ಲ ನಮ್ಮ ಜೀವನಕ್ಕೆ ಹಿನ್ನೆಲೆಗಳೂ ಹೌದು, ಸಾಕ್ಷಿಗಳೂ ಹೌದು. ಅವುಗಳನ್ನು ಅರಿಯಬಲ್ಲ ವ್ಯಕ್ತಿಗಳಿಗೆ ಪ್ರೇರಣೆಯೂ ಹೌದು, ಸತ್ಯವೂ ಹೌದು. ಆರ್ಯಾವರ್ತದ ತುದಿಯಿಂದ ತುದಿಯತನಕ ಚಾಚಿದ್ದು, ಬಾನಿನ ಕುಡಿಯನ್ನೇ ಇಣಿಕಿ ನೋಡುವ ಹಿಮವತ್ಪರ್ವತವು, ಆರ್ಯಾವರ್ತದಲ್ಲಾದ ಹಲವೊಂದು ಜನಾಂಗಗಳ ಜೀವನ ನಾಟಕಕ್ಕೆ ಚಿರಸಾಕ್ಷಿಯಾಗಿದೆ. ಅದೂ ಕೂಡ ಜಗತ್ತಿನ ಮಾನದಿಂದ ಅಚಿರವೆನಿಸಿದರೂ, ಅದರ ಮುಂದೆ ನಾಟಕವಾಡುವ ಜೀವಿಗಳ ಪಾಲಿಗೆ ಅದು ಚಿರವಸ್ತುವೇ. ಇವೆಲ್ಲವುಗಳ ಬಾಳ್ವೆ ಮಿಂಚಿನಂತೆ ಮಾಯವಾಗಿ ಹೋಗಿದ್ದರೆ, ಅದು ಇನ್ನೂ ನೆಲೆಯಾಗಿ ನಿಂತ, ಇವೆಲ್ಲವುಗಳ ಸಾವನ್ನು ಕಂಡು, ಕಲ್ಯಾಣವನ್ನು ಕೋರಿದ ಶಿವನಂತೆ ಪ್ರೇರಣೆ. ಆರ್ಯರ ಮನೋಭಾವ, ತತ್ವಜ್ಞಾನ, ಸಂಸ್ಕೃತಿಗಳು ಹಿಮಾಲಯವನ್ನು ಮರೆತಿದ್ದರೆ ಇಂದೆಷ್ಟು ಬರಡಾಗಿ ಕಾಣಿಸುತ್ತಿದ್ದುವೊ! ನಮ್ಮ ಪಾಲಿಗೆ ಹಿನ್ನೆಲೆಯಾದ ಇಂಥ ತೆರೆ ಅದೆಷ್ಟು ವಿಶಾಲವಾಗುತ್ತದೋ ಮನಸ್ಸು ಅಷ್ಟು ವಿಸ್ತರಿಸಲು ಸಹಾಯ. ನಮ್ಮ ಕಣ್ಣೆದುರಿನ ಬೆಟ್ಟಗಳು ಎಷ್ಟು ಉನ್ನತವಾಗಿರುತ್ತವೋ ನಮ್ಮ ಮನಸ್ಸಿನ ಬಯಕೆ ಅಷ್ಟು ಎತ್ತರಕ್ಕೆ ಏರಲು ಸಹಾಯ. ಇಂಥ ಹಿನ್ನೆಲೆಗಳು ವರ್ಷದ ವಿವಿಧ ಋತುಗಳಲ್ಲಿ ಬೇರೆ ಬೇರೆ ಉಡುಗೆಗಳನ್ನು ಉಡುತ್ತವೆ. ಬೇರೆ ಬೇರೆ ಸಮಯಗಳಲ್ಲಿ ಬೇರೆ ಬೇರೆ ಒಯ್ಯಾರ, ಒನಪು ಗಳನ್ನು ತಾಳುತ್ತವೆ. ಒಂದೇ ಕಡಲು, ಒಂದೇ ನದಿ, ಒಂದೇ ಬಯಲು, ಒಂದೇ ಬೆಟ್ಟ — ಮುಂಜಾನೆ ಬೇರೆ, ಮಧ್ಯಾಹ್ನ ಬೇರೆ, ಸಂಜೆ ಬೇರೆ, ರಾತ್ರಿ

ಬೇರೆ. ಬೇಸಿಗೆಯಲ್ಲಿ ಬೇರೆ, ಮಳೆಯಲ್ಲಿ ಬೇರೆ; ವಸಂತದಲ್ಲಿ ಬೇರೆ, ಹೇಮಂತದಲ್ಲಿ ಬೇರೆ—ಹೀಗೆ ಕಾಣಿಸುವುದರಿಂದ ಎಂಥ ಬಂಜೆ ಮನಸ್ಸೂ ಹುರುಪುಗೊಂಡು, ಭಾವನೆಗಳ ಓಲಾಟಕ್ಕೆ ತೇಲಾಡುತ್ತದೆ. ಚಿರವಾಗಿ ಕಾಣಿಸುವ ನದಿ, ಬಯಲು, ಬೆಟ್ಟಗಳು ಕಾಲಮಾನದ, ದಿನಮಾನದ ಒನಪು ವೈಯ್ಯಾರಗಳನ್ನೆಲ್ಲ ತೊಟ್ಟುಬರುವಾಗ, ಅವುಗಳ ಜೀವನದಲ್ಲಿ ಹಾಸು ಹೊಕ್ಕಾದ ಬಾನು, ಎಣೆವಕ್ಕಿಯಂತೆ ಈ ಮೇಳವನ್ನು ಪೂರ್ಣಗೊಳಿಸುತ್ತದೆ. ಬಟ್ಟಬಯಲಾಗಿರುವ ಅಂಬರಮಾರ್ಗವು ಪೀತಾಂಬರವಾಗುವುದುಂಟು. ಹೊನ್ನಿನ ಹಾಳೆಯಾಗುವುದುಂಟು. ಚುಕ್ಕಿಗಳ ತೋಟವಾಗುವುದುಂಟು. ತೇಜಸ್ಸಿನಿಂದ ಕಣ್ಣನ್ನು ಕುಕ್ಕುವುದುಂಟು. ಲಾಲಿತ್ಯದಿಂದ ಮನಸ್ಸನ್ನು ಮೋಹಿಸುವುದುಂಟು. ಪ್ರಶಾಂತಿಯಿಂದ ತೃಪ್ತಿಗೊಳಿಸಿ ತಲೆತೂಗಿಸುವುದುಂಟು. ತನ್ನ ನಗ್ನ ಸೌಂದರ್ಯದಿಂದಲೇ ಬಾನು ನಿಸರ್ಗಕ್ಕೆ ಮೇಳವಾದುದು ಸಾಲದೆಂಬಂತೆ, ಮುಗಿಲ ಬಟ್ಟೆಯನ್ನುಟ್ಟು ತೋರದ ರಸಾವೇಶಗಳಿಲ್ಲ. ಶಾಂತಿ, ಕರುಣ, ರೌದ್ರಗಳೆಲ್ಲ ಮುಗಿಲುಗಳಲ್ಲಿ ಮನೆ ಮಾಡಿಕೊಂಡಿರಬೇಕು—ಎನ್ನುವ ಭ್ರಾಂತಿ ಯಾರಿಗೂ ಆಗುತ್ತದೆ. ಹೀಗೆ ಗಗನದೊಡನೆ ಮೇಳವಾಗಿ ನಿಂತ ನಿಸರ್ಗದ ನೂರಾರು ಭವ್ಯ ನೋಟಗಳು, ಜೀವಿಗಳ ಮುಂದೆ ತಾವೂ ನಾಟಕವಾಡುತ್ತವೆ. ತಮ್ಮ ಜೀವನ ನಾಟಕ ಮಾತ್ರ ಅರ್ಥಪೂರಿತವಾದಲ್ಲಿ, ಅವುಗಳ ಹಿಮ್ಮೇಳ ಅರ್ಥಹೀನವಾದದ್ದೇ?

**ಬಡವರಿಗೂ ದೊರೆಯುವ ಭಾಗ್ಯ**

ಕಣ್ಣಿಗೆ ಕಾಣಿಸದ ಬರಹ, ಕಿವಿಗೆ ಕೇಳಿಸದಂಥ ಮಾತು, ನಿಸರ್ಗದ ನೋಟದಲ್ಲಿ ಅಡಕವಾಗಿವೆ. ಅವುಗಳೇ ತಮ್ಮ ಹಿಮ್ಮೇಳ, ತನ್ನ ಜೀವನಕ್ಕೆ ಅವೇ ಹಿನ್ನೆಲೆ—ಎಂದು ತಿಳಿಯಬಲ್ಲ ವ್ಯಕ್ತಿಗೆ ನಿಸರ್ಗ ತಿಳಿಸುವಷ್ಟು ಸತ್ಯ ಸೊಗಸುಗಳು ಇನ್ನಾವುದರಿಂದಲೂ ದೊರೆಯಲಾರವು. ತಾಸು ತಾಸುಗಳ ಶಾಸ್ತ್ರ, ಕಾವ್ಯ ಪ್ರವಚನಗಳಿಂದ, ದಿನದಿನಗಳ ಜೀವನ ಸಂಗರದಿಂದ, ಯುಗಯುಗದ ಮೂಕ ತಪಸ್ಸಿನಿಂದ ದೊರೆಯದಿರುವ ಜ್ಞಾನವನ್ನು ದೊರಕಿಸುವಷ್ಟು ಶಕ್ತಿ ನಿಸರ್ಗಕ್ಕಿದೆ. ಅದು ಕೊಡುವ ಪ್ರೇರಣೆ ಹೊಸ ಗಾಳಿಯಷ್ಟು ಹಸನು! ಒಮ್ಮೆ ನಿಸರ್ಗದೊಡನೆ ಮೈಮರೆತು ತಲ್ಲೀನರಾದೆವೆಂದರೆ, ಕಣ್ಮುಂದಿರುವ ಲೋಕದಿಂದ ಪ್ರೇರಿತವಾದರೂ, ಬೇರೆಯೇ ಇನ್ನೊಂದು ಲೋಕ ಕಾಣಿಸುತ್ತದೆ. ಜೀವವು ವ್ಯಕ್ತಿ ಭಾಷೆಯನ್ನು ಮರೆತು

ವಿಸ್ತಾರವಾದ ಬಣ್ಣಗಳಲ್ಲಿ, ನಾದಗಳಲ್ಲಿ, ತೆರೆಗಳಲ್ಲಿ, ಲೋಲುಪ್ತವಾದಂತೆ ಕಾಣುತ್ತದೆ. ಅಲ್ಲಿ ದೊರೆಯುವ ಸುಖ, ಸವಿ ಅನುಭವ ಸಾಧ್ಯ. ಅದರ ಸ್ಮರಣೆಗೂ, ವರ್ಣನೆಗೂ ಬರಲಾರವು. ಅದರಿಂದ ವ್ಯಕ್ತಿ ಗಳಿಸುವ ಲಾಭ ಅಷ್ಟಿಷ್ಟಲ್ಲ. ಯಾರೂ ಕಸಿಯಲಾರದ, ಯಾರು ನೋಡಿದರೂ ಬರಿದಾಗದ, ಯಾವ ಚೌಕಸಿಗೂ ಪಾತ್ರವಾಗದ ಸೌಂದರ್ಯವದು. ಸೊಗಸಾದ ಹಿಮ ಪರ್ವತದ ಬುಡಕ್ಕೆ ಹೋಗುವದಕ್ಕೇ ನಡೆಯಬೇಕು, ನಿಜ. ಹಣವೂ ಬೇಕಾದೀತು. ಆದರೆ ಬಡವರ ಮನೆಯ ಬಾಗಿಲಲ್ಲೂ ನಿಸರ್ಗವಿದೆ. ನೋಟದಿಂದ ಹಿಗ್ಗುವಷ್ಟು ಅವಕಾಶಗಳಿವೆ. ಇದರಿಂದ ನಿಸರ್ಗ ನಿರೀಕ್ಷಣೆಯ ಆನಂದ, ಬಡತನ ಶ್ರೀಮಂತಿಕೆಗಳ ಅಂತರಗಳನ್ನು ಅಲ್ಲಗಳೆಯಬಲ್ಲದು.

**ಕಾಗದದ ಹೂ**

ನಿಸರ್ಗದಲ್ಲಿ ಬೆರೆಯುವ ಪ್ರವೃತ್ತಿ ಬೆಳೆದಂತೆ ಮನುಷ್ಯನ ಮನಸ್ಸು ದಿನೇ ದಿನೇ ಅರಳುತ್ತದೆ. ಅಂತೆಯೇ ವಿಸ್ತರಿಸುತ್ತದೆ. ನಿಮ್ಮ ಕೈಗೆ ವಿಶಾಲ ವಾದ ಸ್ವರ್ಗ ಸಿಗುವಂತಿದ್ದರೆ ಇನ್ನೊಬ್ಬನ ಕೈಯ್ಯ ಕಾಗದದ ಹೂವಿಗಾಗಿ ಬಾಯಿಬಿಡಬೇಕೇ? ನಾಗರಿಕತೆಯು ನಮ್ಮ ಮುಂದೆ ರಾಶಿರಾಶಿಯಾಗಿ ಸುರಿಯುವ ಅನೇಕ ಸುಖೋಪಕರಣಗಳು ಕಾಗದದ ಹೂವುಗಳಂತೆ. ಹಣವೇ ಅವುಗಳ ಪ್ರೇರಣೆ. ಹಣವೇ ಅವುಗಳ ಸಮಾಧಿ. ನಿಸರ್ಗವು ಕೊಡುವ ಸುಖ ಎಂದೂ ಅಷ್ಟು ಬರಡಲ್ಲ. ಅದರ ಸೇವನೆಗಾಗಿ ನಮ್ಮ ವ್ಯಕ್ತಿತ್ವವನ್ನು ನಿಸರ್ಗದಲ್ಲಿ ಮರೆಯಿಸಬೇಕು. ಅಲ್ಲಿ ನಮ್ಮ ಮನಸ್ಸು ಸಣ್ಣದರಿಂದ ದೊಡ್ಡದರಲ್ಲಿ ಲೀನವಾಗುತ್ತದೆ. ಮಾತ್ರವಲ್ಲ ಹಿಗ್ಗಿ ವಿಸ್ತರಿಸಿ ಹರಿಯುತ್ತದೆ. ಆದರೆ ನಾಗರಿಕತೆಯ ಕಾಗದದ ಹೂವು ಹಾಗಿಲ್ಲ. ಅದನ್ನು ಪಡೆಯುವ ಕ್ರಮವಂತು ದೊಡ್ಡವನು ಸಣ್ಣವನಾಗುವ ಮಾರ್ಗ. ಈ ಕಾಗದದ ಹೂವಿಗಾಗಿ, ನೂರಾರು ಮಂದಿ ಮೇಲಾಟ ನಡೆಸಿ, ಒಬ್ಬೊಬ್ಬ ರಿಗೆ ಮಾತ್ರ ದೊರಕಿ, ಉಳಿದವರಿಗೆ ಇಲ್ಲವಾಗುವ ವಸ್ತು. ಅದನ್ನು ಪಡೆದ ಮೇಲೆ—ಪಡೆದವನ ಮನಸಿನಲ್ಲೊಂದು ಹೆಮ್ಮೆ; ಉಳಿದವರ ಮನಸ್ಸಿನ ಲ್ಲೊಂದು ಕುಗ್ಗು. ನಿಸರ್ಗದ ಯಾವ ಸುಖವೂ ಈ ತೆರನದ್ದಲ್ಲ. ಮನ ಸ್ಸನ್ನು ಚಿಕ್ಕದಾಗಿ ಮಾಡುವ ಪ್ರವೃತ್ತಿಯುಳ್ಳದಲ್ಲ. ಪ್ರೇಕ್ಷಕರ ಸಂಖ್ಯೆ ಯಿಂದ ನಿಸರ್ಗ ಬರಿದಾಗಲಾರದು. ಅಂತೆಯೇ ಹಿಮಾಲಯ ಎಂದಿಗೂ ನಮ್ಮ ಪ್ರೇರಣೆ. ಫ್ಯೂಜಿಯಾಮಾ ಬೆಟ್ಟ ಎಂದಿಗೂ ಜಪಾನಿಯರ ಸ್ಫೂರ್ತಿ.

ಆಲ್ಪ್ಸ ಪರ್ವತ ಎಂದೆಂದಿಗೂ ಸ್ವಿಸ್ಸ ಜನರ ಭಾಗ್ಯ.

**ಅನುಭವಾತೀತ ಸೌಂದರ್ಯ**

ನಿಸರ್ಗ ಬರಿಯ ಸೊಗಸನ್ನು ಉಣಿಸುವುದರಲ್ಲಿ ಮಾತ್ರ ಶ್ರೇಷ್ಠವೆಂದು ತಿಳಿಯಬೇಕಿಲ್ಲ. ಆ ಸೊಗಸಿನ ಹಿಂದೆ ಏನೋ ಒಂದು ಸತ್ಯವಿದೆ ಎಂಬ ಪ್ರೇರಣೆಯೂ ಅದರಿಂದ ದೊರೆಯಬಹುದಾದುದರಿಂದಲೇ ಅದು ದೊಡ್ಡದು. "ನಿಕಾಲಸ್ ರೋರಿಚ್"ನಂಥ ಚಿತ್ರಕಾರರು ಹಿಮಾಲಯದ ಅಥವಾ ತಿಬೇಟಿನ ಬೆಟ್ಟಗಳ ಬಣ್ಣಗಳಿಗೆ ದಣಿದಂತೆಯೆ ಕಾಣಿಸಿಲ್ಲ. ಆ ಬಣ್ಣಗಳ ಹಿಂದೆ ನಲಿಯುವ ಇನ್ನೇನೋ ಒಂದು ಚೇತನವಿದೆ. ಅವನ ಚಿತ್ರಗಳಲ್ಲಿ ವ್ಯಕ್ತ ಬಣ್ಣಗಳು ಮಾತನಾಡುವಂತೆ ಅವ್ಯಕ್ತವಾದ ಬೇರೆ ನುಡಿಯಿದೆ. ಹಿಮಾಲಯದ ಆತ್ಮವೊಂದು ವಿವಿಧ ಮನೋವೃತ್ತಿಗಳಲ್ಲಿ ಜೀವಂತವಾಗಿದ್ದಂತೆ ಕಾಣುತ್ತದೆ. ನಿಸರ್ಗದ ಬಾಹ್ಯನೋಟ-ಕಾರ್ಮುಗಿಲು ಬಿರುಗಾಳಿಗಳಲ್ಲಿ, ನೆರೆ, ಭೂಕಂಪಗಳಲ್ಲಿ ಕ್ರೂರವಾಗಿ ಕಾಣಿಸಬಹುದು. ವಸಂತದಲ್ಲಿ ನಗುವಿಂದಲೂ ಹೇಮಂತದಲ್ಲಿ ಕ್ಷುಬ್ಧತೆಯಿಂದಲೂ ಕಾಣಿಸಬಹುದು. ನಿಸರ್ಗದ ನಗುವಾಗಲಿ, ಕೋಪವಾಗಲಿ, ನಿದ್ರೆಯಾಗಲಿ, ಜಾಗರವಾಗಲಿ-ಒಂದೇ ಚೈತನ್ಯದ ವಿವಿಧ ಮನೋಭಾವಗಳನ್ನು ಹೇಳುತ್ತವೆ. ಅಲ್ಲಿನ ಸಾವು ಸಾವಲ್ಲ; ನಗುವು ನಗುವಲ್ಲ; ಮುರುಕವೂ ಮುರುಕವಲ್ಲ. ಒಂದೊಂದು ಜೀವ ತಾನು ತಾನೆಂದು ಮೇಲಾಡುವಾಗ ಅವನ್ನೆಲ್ಲ ನುಂಗಿಬಿಡುವ ನೆರೆ ಕಾಳ್ಗಿಚ್ಚುಗಳು ನಮಗೂ ಮೀರಿದ, ನಮಗೂ ಹಿರಿದಾದ, ನಮ್ಮ ವೈಯಕ್ತಿಕ ಉದ್ದೇಶಗಳನ್ನು ಅಲ್ಲಗಳೆಯುವ ಬೇರಾವುದೋ ಚೈತನ್ಯವನ್ನು ಸಾರುತ್ತವೆ. ನಿರ್ಸಗದ ಹೊರನೋಟಗಳ ನಿರೀಕ್ಷಣೆ ಒಳನೋಟದಲ್ಲಿ ಇನ್ನೇನೋ ಸತ್ಯವನ್ನು ಹೇಳುತ್ತದೆ. ಅದರಿಂದ ದೊರೆಯುವ ಶಾಂತಿ ನಿಸರ್ಗದಷ್ಟೇ ವಿಶಾಲ, ಭವ್ಯ, ಸ್ಥಿರ.

**ಅಲೌಕಿಕ ಪ್ರೇರಣೆ**

ನಿಸರ್ಗದ ಬೆಟ್ಟವೊಂದು ಇಲ್ಲವೆ ಬಯಲೊಂದು, ವಿಶಾಲವಾಗಿ ಹರಡಿದ ಕಡಲೊಂದು ನಮ್ಮ ಕಣ್ಣುಗಳಿಂದಲೇ ನಮಗೆ ಗೋಚರ. ಅವುಗಳು ಕೊಡುವ ಹೊರ ನೋಟಕ್ಕೆ ಸಮನಾಗಿ ಒಳನೋಟ ಒಂದಿದೆ ಎಂದು ನುಡಿದದ್ದಾಯಿತು. ವ್ಯಕ್ತಿ ಚಿಕ್ಕವನು. ಮನುಷ್ಯನ ನೋಟದ ಆಯ ಅಳತೆಗಳು ಸಣ್ಣವು. ಆದರೆ ಅವುಗಳ ಮೇಲೆ ಉನ್ನತವಾದ ಬೆಟ್ಟ, ತೀಕ್ಷ್ಣ

ವಾದ ಮಿಂಚು, ಅಬ್ಬರದಿಂದ ಕೂಡಿದ ಕಡಲು ಪರಿಣಾಮ ಉಂಟುಮಾಡು ವಾಗ, ವ್ಯಕ್ತಿ ತನ್ನ ವಸ್ತು ಪ್ರಪಂಚದ ಸಹಜ ಅಳತೆಗಳನ್ನು ತಾತ್ಕಾಲಿಕ ವಾಗಿಯಾದರೂ ಕಳೆದುಕೊಳ್ಳುತ್ತಾನೆ. ಅವನ ಭಾಷೆಯಲ್ಲಿನ ಒಂದು, ಎರಡುಗಳು ಹೋಗಿ ನೂರು ಸಾವಿರ ಕೋಟಿಗಳಾಗುತ್ತವೆ. ಅವನ ಅಳತೆ ಪಟ್ಟಿಯು ಇಂಚು, ಅಡಿಗಳು, ಹರದಾರಿ, ಯೋಜನಗಳಾಗುತ್ತವೆ. ಸಣ್ಣ ತುಣುಕು, ಚೂರುಗಳು ಬೆಟ್ಟ ಬಯಲುಗಳಷ್ಟು ದೊಡ್ಡವಾಗುತ್ತವೆ. ಯಥಾ ವತ್ತಾದ ಎಣಿಕೆಯು ಊಹಾರಾಜ್ಯದಲ್ಲಿ ವಿಸ್ತರಿಸುತ್ತದೆ. ತಾನು ನಿಸರ್ಗ ದಲ್ಲಿ ಕಂಡ ಬಣ್ಣ ರೂಪಗಳಿಗಿಂತ ಮಿಗಿಲಾದ ಬಣ್ಣಗಳನ್ನು, ರೂಪಗಳನ್ನೂ ನಿರ್ಮಿಸುತ್ತದೆ. ಹೊರಗೆ ಕಂಡ ಒಂದೊಂದು ಧ್ವನಿಯು ಈ ಒಳ ನೋಟ ದಲ್ಲಿ ವಿಸ್ತರಿಸಿ ಅಲೌಕಿಕ ಸ್ವರ್ಗವೇ ಆಗುತ್ತದೆ. ನಿಜ, ಈ ಸ್ವಪ್ನರಾಜ್ಯದಲ್ಲಿ ಎಲ್ಲವೂ ದೊಡ್ಡ ಪರಿಮಾಣದ ವಸ್ತುಗಳು. ಅದರ ದೊಡ್ಡತನದಿಂದಾಗಿ, ನಿಸರ್ಗ ನಿರೀಕ್ಷಣಾ ಕಾಲ ಮುಗಿದ ಮೇಲೆಯೂ ಮನಸ್ಸಿನಲ್ಲಿ ಅದರ ಸ್ವಪ್ನಸಂಸ್ಕಾರ ಉಳಿಯುತ್ತದೆ. ಅಲ್ಲಿನ ಆಯ, ಅಳತೆಗಳು ಬದುಕಿನಲ್ಲಿ ಔದಾರ್ಯವನ್ನು ಬೆಳೆಯಿಸಲು ಸಹಾಯವಾಗುತ್ತವೆ. ನಮ್ಮ ನಡವಳಿಕೆಗಳು ಮೊದಲಿಗಿಂತ ವಿಸ್ತರಿಸಲು ಸಾಧ್ಯವಾಗುತ್ತದೆ.

### ಸೂಕ್ಷ್ಮ ದರ್ಶನ, ದೂರ ದರ್ಶನ

ಇಂದು ಮನುಷ್ಯನ ಕಣ್ಣಿನ ಶಕ್ತಿ ಇಮ್ಮಡಿಸಿದೆ. ಅವನ ಪಾಲಿಗೆ ಈ ತನಕ ಮಹಾ ಸಾಗರ, ಪರ್ವತಾವಳಿಗಳಂಥ ದೊಡ್ಡ ವಸ್ತುಗಳೇ ಪ್ರೇರಕ ವಾಗಿದ್ದರೆ ಇಂದು ತಾನು ಹೆಚ್ಚಿಸಿಕೊಂಡ ಹೊಸ ಕಣ್ಣುಗಳಿಂದ ಹಿಂದೆ ಕಾಣದ ಎಷ್ಟೋ ನೋಟಗಳು ಅವನ ಪಾಲಿಗೆ ಎಟಕಿವೆ. “ವಿಲ್ಸನ್ ಒಬ್ಸರ್ವೆಟರಿ” ಯಲ್ಲಿನ ನೂರು, ಇನ್ನೂರು ಇಂಚು ಯವಗಳ ದೂರ ದರ್ಶಕ ಯಂತ್ರಗಳು ಚಂದ್ರನನ್ನು ಹಿಮಾಲಯಕ್ಕಿಂತ ಹತ್ತಿರ ತಂದಿವೆ. ನಕ್ಷತ್ರಗಳನ್ನು ಊಹಾರಾಜ್ಯದಿಂದ ವಸ್ತುಲೋಕಕ್ಕೆ ತಂದಿವೆ. ಬ್ರಹ್ಮ ಈ ಭೂಮಿಯನ್ನು ಸೃಷ್ಟಿಸಿ, ಆಮೆಯ ಮೇಲೆ ಕುಳ್ಳಿರಿಸಿದ ಕತೆಗಳು ನಮಗೆ ತಿಳಿದವುಗಳು. ಈ ಭೂಮಿಯೇ ಹಿರಿದು, ಸೂರ್ಯನು ಅದಕ್ಕಿಂತ ಕಿರಿದು ಎಂಬ ಮೌಢ್ಯಕ್ಕೆ ಅದು ಕಾರಣವಾಗಿತ್ತು. ಮನುಷ್ಯನ ಊಹೆ, ಕನಸುಗಳು ವಿಸ್ತರಿಸಿದ್ದುದರ ಫಲವಾಗಿ ದೂರದರ್ಶನ ಸಾಧ್ಯವಾಯಿತು. ಸೂರ್ಯ, ತಾರೆಗಳು ಭೂಮಿಗಿಂತ ದೊಡ್ಡವುಗಳೆನಿಸಿವೆ. ವಿಶ್ವ ವಿಸ್ತರಿಸಿದೆ. ಯುಗ,

ಪ್ರಲಯಗಳ ಅವಧಿ, ವೈಶಾಲ್ಯಗಳು ಬೆಳೆದು ಮೇರುಗಳೂ, ಜಂಬುದ್ವೀಪ ಗಳೂ ಯೋಗ್ಯ ಸ್ಥಾನದಲ್ಲಿ ಬಂದು ನಿಂತಿವೆ. ಮನುಷ್ಯನ ಮನಸ್ಸು ಭೂಮಿಗೆ ಅನ್ವಯಿಸುವ ಸ್ವಾರ್ಥವನ್ನು ಮೀರಿ, ವಿಶ್ವದ ವಿಸ್ತೃತ ಕಲ್ಪನೆಯ ಪಾಠ ವನ್ನಾದರೂ ಕಲಿತುಕೊಂಡಿದೆ.

ಒಂದು ಅನುಭವದ ಕತೆ ಹೀಗೆ! ಇನ್ನೊಂದು ಬೇರೆಯೇ ಲೋಕವಿದೆ. ಇದೂ ಮನುಷ್ಯನ ಬರಿಗಣ್ಣಿಗೆ ಅಳವಲ್ಲದ ಲೋಕವಾಗಿತ್ತು. ಸಮೀಪ ವಾಗಿದ್ದರೂ ಕ್ಷುಲ್ಲಕವೆನಿಸಿತ್ತು. ಸೂಕ್ಷ್ಮತೆಯ ಕಡೆಗೆ ಮನುಷ್ಯನ ಕಾಂಕ್ಷೆ ಬೆಳೆದು ಸೂಕ್ಷ್ಮದರ್ಶಕ ನಿರ್ಮಾಣವಾಯಿತು. ಒಂದೊಂದು ಸಸ್ಯಕಣದ, ಜೀವಕಣದ, ರಕ್ತಕಣದ ಒಳಗಡೆಯ ಲೋಕ ಅಪಾರವಾದದ್ದು, ವಿಚಿತ್ರ ವಾದದ್ದು—ಎಂದು ಅದು ಹೇಳತೊಡಗಿದೆ. ಹೊರಗಡೆ ಕಾಣುವ ರೂಪ ವೈಚಿತ್ರ್ಯಗಳ ಬೆಡಗು ಒಂದು ಎಲೆಯ ಕಣದಲ್ಲೋ ಪರಾಗದ ಕಣದಲ್ಲೋ ಕಾಣುವಂತಾಗಿದೆ. ಎಲ್ಲದಕ್ಕೂ ಮಿಗಿಲಾಗಿ–ಕಣ್ಣಿಗೆ ಕಾಣಿಸುವ ಜೀವಿಗಳ ಸಂಖ್ಯೆಗಿಂತ ಎಷ್ಟೋ ಸಾವಿರ ಪಾಲು ಅಧಿಕ ಅಗೋಚರ ಜೀವಿಗಳಿವೆ. ಮನುಷ್ಯನ ಪಾಲಿಗೆ ಹುಲಿಗಿಂತಲೂ ಹೆಚ್ಚಿನ ಭಯಂಕರ ಜೀವಿ, ಅಣುಜೀವಿ ಗಿಂತಲೂ ಕ್ಷುಲ್ಲಕವಾದ ವೈರಸ್ಸು–ಎಂದು ಈ ಹೊಸ ದರ್ಶನ ಹೇಳುತ್ತದೆ. ಹೀಗೆ ನಿಸರ್ಗನಿರೀಕ್ಷಕನ ಪಾಲಿಗೆ ಲೋಕವು ನೂರುಮಡಿ ವಿಸ್ತರಿಸಿದೆ. ಯಾವ ಕಡೆಗೆ ಹೋದರೂ ಕಣ್ದೆರೆದು ನೋಡುವವನ ಪಾಲಿಗೆ, ಸತ್ಯ, ಸೊಗಸುಗಳನ್ನುಣಿಸುವ ಸಾಧನಗಳು ಹೆಚ್ಚಿವೆ.

ನಿಸರ್ಗದ ಮಾನದಿಂದ ಜೀವಿಗಳು ಸಣ್ಣವು. ಮನುಷ್ಯನು ಸಣ್ಣವನು. ನಿಸರ್ಗದ ಮುಂದೆ ಮನುಷ್ಯ ಸಣ್ಣವನಾಗಿ ಕಾಣಿಸಿದರೂ, ನಿಸರ್ಗದ ಪ್ರೇರಣೆಯಿಂದ ಅದೇ ಮನುಷ್ಯ ದೊಡ್ಡವನಾಗಬಲ್ಲ. ಅವನ ಕಲ್ಪನೆಯಲ್ಲಿ ಹಿಮಾಲಯಕ್ಕಿಂತ ಹಿರಿದಾದ ಬೆಟ್ಟ, ಶಾಂತಸಾಗರಕ್ಕಿಂತ ಅಗಾಧವಾದ ಸಾಗರ ಉಂಟಾಗಲಿಲ್ಲವಾದರೂ ಇಂದು ಅವೇ ಭಾವಗಳು ಬೆಳೆದು, ವ್ಯಕ್ತಿ ತಾನು ಮಡಿದರೂ ಮಡಿಯಲಾರದ ಕನಸುಗಳನ್ನು ಕಾಣಲು ಶಕ್ತನಾಗಿ ದ್ದಾನೆ. ನಿಸರ್ಗ ನಿರೀಕ್ಷಣೆಯಿಂದ ಪ್ರೇರಣೆಗೊಂಡು ಅವನ ಮನಸ್ಸು, ಅನೇಕ ಸುಂದರವಾದ, ಭವ್ಯವಾದ ಕನಸುಗಳನ್ನು ಕಟ್ಟಿದೆ. ಅವನೂ ಒಬ್ಬ ವಿಶ್ವಕರ್ಮನಾಗಿದ್ದಾನೆ.

**ಪ್ರತಿಸೃಷ್ಟಿ**

ನಿಸರ್ಗದ ಸಂಪರ್ಕದಿಂದ ಪಡೆದ ಪ್ರೇರಣೆಯು ವ್ಯಕ್ತಿಯ ಜೀವನದಲ್ಲಿ ಲಯವಾಗಬೇಕೆಂದಿಲ್ಲ. ಅದರ ಪ್ರೇರಣೆಗೆ ಪ್ರತಿಯಾಗಿ ಸ್ಫುರಿಸಬಲ್ಲ ಅನೇಕ ಜೀವರಿದ್ದಾರೆ. ನಿಸರ್ಗದಿಂದ ತಮಗೆ ದೊರೆತ ಆನಂದಾದಿ ಅನುಭವಗಳನ್ನು ಅವರು ಪ್ರತಿಯಾಗಿ ಸೃಷ್ಟಿಸಬಲ್ಲರು. ಈ ಪ್ರತಿ ಸೃಷ್ಟಿಯು—ವ್ಯಕ್ತಿಯ ಮಿತಿಯನ್ನು ಉಳ್ಳದಾದರೂ, ಅದು ವ್ಯಕ್ತಿಯು ತನ್ನ ಸುತ್ತಲಿನ ಜಗತ್ತಿಗೆ ಸಲ್ಲಿಸಬಹುದಾದ ಒಂದು ಪ್ರಮುಖ್ಯ ಕಾಣಿಕೆ. ತಾನು ಕಂಡ ಸತ್ಯವನ್ನು ತಾನು ಉಂಡ ಆನಂದವನ್ನು, ಅವನು ತನ್ನ ಜನರಿಗೆ ತಿರುಗಿ ಸಲಿಸುತ್ತಾನೆ. ಇದರಲ್ಲಿ ಅವನ ಭಾವಾವೇಶಗಳಿಗೂ, ಊಹೆ, ಕಲ್ಪನೆಗಳಿಗೂ ತುಂಬ ಅವಕಾಶವಿರುವುದರಿಂದ ಅದು ಅವನ ವ್ಯಕ್ತಿತ್ವದ ಕಾಣಿಕೆಯೊಂದರೂ ಸಲ್ಲು ತ್ತದೆ. ಅವನ ಜೀವನವು ನೆರೆಕರೆಯ ಜೀವನದಲ್ಲಿ ಪರಿಣಮಿಸಲು ಅದೊಂದು ಉತ್ತಮವಾದ ಸಾಧನ. ನಿಸರ್ಗದಿಂದ ದೊರೆತ ಕಾವ್ಯ ಪ್ರೇರಣೆಯು ಮಾತು, ಗೀತೆಗಳಿಂದ ಪ್ರತಿರೂಪನ್ನು ತಾಳಿ, ನೂರಾರು ಹೃದಯಗಳನ್ನು ಸೇರಿ, ಮೂಲ ಪ್ರೇರಣೆಗೆ ಕಾರಣವಾದ ಆನಂದವನ್ನು ಅಂಥವರ ಹೃದಯ ಗಳಲ್ಲಿಯೂ ಹರಿಯಿಸಬಲ್ಲದು. ಸೃಷ್ಟಿಯ ಬಣ್ಣ ಬೆಡಗುಗಳಿಂದ, ಲಹರಿ, ಆವೇಶಗಳಿಂದ ಪ್ರೇರಿತನಾದ ಚಿತ್ರಕಾರನೊಬ್ಬನು ಬರೆದ ಚಿತ್ರವು, ಇನ್ನಿತರ ಪ್ರೇಕ್ಷಕರ ಮನಸ್ಸಿನಲ್ಲಿ ಅದೇ ಬಗೆಯ ಪ್ರೇರಣೆಯನ್ನು ಕೆರಳಬಲ್ಲುದು. ಈ ಬಗೆಯ ಪ್ರೇರಣೆಯು—ವ್ಯಕ್ತಿಯ ಮೂಲಕ ಕಾವ್ಯ, ಕವನ, ಗೀತ, ನೃತ್ಯ, ಚಿತ್ರ ಶಿಲ್ಪ ಮೊದಲಾದ ಹಲವು ಮುಖಗಳಿಂದ ಸುತ್ತಲಿನ ಜೀವಿಗಳ ಬದುಕನ್ನು ಸೊಗಸುಗೊಳಿಸಬಲ್ಲುದು. ಬಾಹ್ಯ ಅನುಭವಗಳನ್ನು ತನ್ನ ಹೃದಯದ ಮೂಲಕ ಮಿಕ್ಕ ಜೀವಕೋಟಿಗೆ ಸಲಿಸುವ ಕೆಲಸ ದೊಡ್ಡದು. ಅದು ತಾಸಿರುವಷ್ಟು ಕಾಲದಲ್ಲಿ ವ್ಯಕ್ತಿ ಮಾಡಬಹುದಾದ ಅತಿ ದೊಡ್ಡ ಕೆಲಸ ವೆಂದರೂ ಸರಿಯೆ.

ಆದರೆ ಎಲ್ಲ ಬಗೆಯ ವ್ಯಕ್ತಿಗಳೂ ಈ ರೀತಿಯಲ್ಲಿ ಪ್ರತಿ ಸೃಷ್ಟಿಯನ್ನು ಮಾಡಲಾರರು. ಅತಿ ದೊಡ್ಡ ಕೃತಿಗಳು, ಅತಿ ದೊಡ್ಡ ಕಾವ್ಯಗಳು ಕೆಲವ ರಿಂದ ಮಾತ್ರವೇ ಶಕ್ಯ. ಹೀಗಿದ್ದರೂ ಬೇರೆ ಬೇರೆ ಮಟ್ಟದ ಜನರು, ಚಿಕ್ಕಪುಟ್ಟ ಕೃತಿಗಳನ್ನು ನಿರ್ಮಿಸಬಹುದು. ಸಂಸಾರದ ಚಿಕ್ಕಪುಟ್ಟ ಆನಂದಗಳನ್ನು ಅವರೂ ಹೆಚ್ಚಿಸಬಹುದು; ಅನುಭವಗಳನ್ನು ಹಸನುಮಾಡಬಹುದು.

## ಲಲಿತ, ಕ್ರೂರಶಕ್ತಿಗಳು

ಈ ತನಕ ಜೀವೇತರ ನಿಸರ್ಗದ ವಿಚಾರವಾಗಿ ಮಾತನಾಡಿದೆವು. ನಿಸರ್ಗದ ತೆರೆಯ ಮುಂದೆ ಎಷ್ಟೊಂದು ಜೀವಿಗಳು ಸದಾ ನಲಿಯುತ್ತಲಿಲ್ಲ! ಮನುಷ್ಯನೊಬ್ಬನೇ ಈ ರಂಗಸ್ಥಳದ ಪ್ರಮುಖ ನಾಯಕನಲ್ಲ. ನೂರಾರು ಬಗೆಯ ಹಕ್ಕಿಗಳು, ಅನೇಕ ಬಗೆಯ ಪಶುಗಳು, ಅಸಂಖ್ಯಾತ ಸಸ್ಯಗಳು ನಮ್ಮ ಸುತ್ತಲೂ ಇವೆ. ಅದರಲ್ಲಿ ಮನುಷ್ಯನೇ, ನಿಸರ್ಗ ಉದ್ದೇಶಿಸದ ಬಗೆಯಲ್ಲಿ ಬದುಕನ್ನು ಸಾಗಿಸುತ್ತಾನೆಂದರೂ ತಪ್ಪಲ್ಲ. ಉಳಿದುವು ನಿಸರ್ಗದಲ್ಲಿ ಬೆರೆತಂತೆ ಕಾಣಿಸುತ್ತವೆ. ಸಸ್ಯ ಇಲ್ಲವೆ ಪಶುಪ್ರಾಣಿಗಳ ಜೀವನ ನಿರೀಕ್ಷಣೆಯಲ್ಲಿಯೂ ನಮ್ಮ ಕಣ್ಣು ತಿದ್ದಬೇಕು. ಚೆಲುವಿನಿಂದ ನಮ್ಮ ಬಗೆಯನ್ನು ಬೆರಗುಮಾಡುವ ಯೋಗ್ಯತೆ ಪ್ರಾಣಿಕೋಟಿಗಳಿಗಿದೆ. ಹುಲಿಯ ಮೈಬಣ್ಣದಲ್ಲಡಗಿದ ಕ್ರೌರ್ಯ, ಹರಿಣದ ಲಾಲಿತ್ಯದಲ್ಲಿ ಅಡಗಿದ ಸೌಮ್ಯ, ಹದ್ದಿನ ಶೀಲಕ್ಕೆ ತಕ್ಕ ರೂಪ, ಒಲುಮೆಗೆ ತಕ್ಕ ನವಿಲಿನ ಬಳುಕಾಟ-ಇಂಥ ನೂರಾರು ನೋಟಗಳು, ತಮ್ಮ ಚೆಲುವಿನಿಂದ, ಗಾಂಭೀರ್ಯದಿಂದ ನಮ್ಮ ಮನಸ್ಸನ್ನು ಪ್ರೇರಿಸಬಲ್ಲುವು. ಈ ಚೆಲುವಿನ ಪಾಠಕ್ಕೂ ಮಿಗಿಲಾದುದು, ಈ ಜೀವಿಗಳ ಪ್ರಪಂಚದಲ್ಲಿನ ಸೆಣಸಾಟ. ಪ್ರತಿಯೊಂದು ಜೀವಿಯೂ ಇನ್ನೊಂದರ ಮೇಲೆ ಅನ್ನಕ್ಕಾಗಿ ಹೊಂದಿಕೊಂಡಿದೆ. ಇದರಿಂದುಂಟಾಗುವ ಸಂಗರದಲ್ಲಿ ಬದುಕನ್ನು ಉಳಿಸಲು ಬದುಕನ್ನು ಅಪಹರಿಸುವ ನೋಟ, ಬದುಕಿಗೆ ಅವಶ್ಯವಿಲ್ಲದ ಹಾನಿಯನ್ನು ಮಾಡದಿರುವ ನಿಯಮ, ಸಾವನ್ನು ಧಿಕ್ಕರಿಸುವ ಸಂತತಿ ಮಾರ್ಗ, ಆ ಸಂತತಿಯನ್ನು ಕಾಯುವ ಬಗೆ—ಇಂಥ ಎಷ್ಟೋ ಎಷ್ಟೋ ಸಂಗತಿಗಳು ಮನುಷ್ಯನ ಕೃತಕ ಸಾಮಾಜಿಕ ನೀತಿಯನ್ನು ತಿದ್ದಬಲ್ಲವು. ಅವನ ಸಾವಿನ ಭೀತಿಗೆ ಸಮಾಧಾನವನ್ನೂ ಬದುಕಿನ ಬಯಕೆಗೆ ಮಿತಿಯನ್ನೂ, ನೀತಿ ತತ್ವಗಳಿಗಿರುವ ಮೇರೆಯನ್ನೂ ತೋರಿಸಬಲ್ಲವು. ಮನುಷ್ಯನು ಜೀವನ ಮಾರ್ಗದಲ್ಲಿ ಬಹುಮಟ್ಟಿಗೆ ತಾನು ಇತರ ಪ್ರಾಣಿಗಳಿಂದ ಭಿನ್ನನೆಂದು ತಿಳಿದಂತೆ ಕಾಣುತ್ತದೆ. ಮನುಷ್ಯನ ವಿಕಾಸವೇ ಪಶುವಿನಿಂದಾಯಿತು. ಪಶುಪ್ರಕೃತಿ ಎಂಬುದು ನಿಂದ್ಯವಾಗಬೇಕಾಗಿಲ್ಲ. ಪಶುಸ್ವಭಾವವು ಇನ್ನೂ ಮಾನವನ ಜೀವನದ ಮೇಲೆ ಅಧಿಕಾರದಲ್ಲಿದೆ. ಅದರ ಎಷ್ಟೋ ನಿಯಮಗಳನ್ನು ಅವನೂ ಮೀರಲಾರ. ಹೀಗಿರುವಲ್ಲಿ ಮನುಷ್ಯ ಸುತ್ತಲಿನ ಜೀವಕೋಟಿಯಿಂದ ಹೊಂದಬಹುದಾದ ಲಾಭ ಅಷ್ಟಿಷ್ಟಲ್ಲ. ಈ ತೆರನ ಜೀವನ

ನಿರೀಕ್ಷಣೆಯಿಂದ—ಜೀವನದ ಲಲಿತ ಶಕ್ತಿಗಳಷ್ಟೇ ಅನಿವಾರ್ಯವಾದುವು ಕ್ರೂರ ಶಕ್ತಿಗಳೆಂದೂ, ಅವೂ ಬದುಕಿನ ಬೆಳೆಗೆ ಸಲ್ಲಿಸುವ ಪಾಲು ಹಿರಿದು ಎಂದೂ ತಿಳಿಯಬೇಕು.

## ನಾದ ರಂಗ

ನಾದರಾಜ್ಯದ ಪ್ರೇರಣೆ ಸ್ವಲ್ಪವೇ? ಸಿಕಾಡಾ (cicada) ಹುಳುವಿನ ಗೀತವನ್ನು ಕೇಳಲು ಮನೆಬಿಟ್ಟು ಅರಣ್ಯಗಳಿಗೆ ತೆರಳುವ ಜಪಾನಿಯರು, ಚೀನಿಯರನ್ನು ಮರುಳರೆನ್ನಬೇಕೇ? ಜೀವಿಗಳಲ್ಲಿ ಸ್ವಾಭಾವಿಕವಾಗಿ ಹೊರಡುವ ನಾನಾ ಬಗೆಯ ಚೀರಾಟ, ಕೂಗು, ಕರೆ, ಗೀತಗಳ ಸಂಖ್ಯೆಯು ಎಷ್ಟು ವಿವಿಧವಾಗಿಲ್ಲ! ತನ್ನ ಅಳವನ್ನರಿತು ಒಂದೇ ಶ್ರುತಿಯಲ್ಲಿ ಚಿಕ್ಕ ಒಂದು ಆಲಾಪವನ್ನು ಹೊರಡಿಸುವ ಗಿಡುಗನ ದನಿ ಅದರ ಶಕ್ತಿಯನ್ನೂ ತೀಕ್ಷ್ಣತೆಯನ್ನೂ ತೋರಿಸಬಲ್ಲುದಾದರೆ, ಬಾಯಿಬಡಕನಂತೆ ಮಂದ್ರದಲ್ಲೇ ವಿಲಪಿಸುವ ಬಾತುಕೋಳಿಯು ಅರಸಿಕ ಶೀಲವನ್ನು ತೋರಿಸುತ್ತದೆ. ಹುಲಿಯ ಘರ್ಜನೆ ಅರಣ್ಯದ ಅವತಾರ ಎನ್ನಿಸುವಂತಾದರೆ, ಮಿಗದ ಕೂಗು ಕತ್ತು ಹಿಚುಕಿದ ಬಡಪಾಯಿಯಂತಿದೆ. ಅವವುಗಳು ತಮ್ಮ ಹಿಗ್ಗಿನಲ್ಲೂ ವ್ಯಥೆಗಳಲ್ಲೂ ತೋರ್ಪಡಿಸುವ ಧ್ವನಿಗಳು ಬಾಳಿನ ಅನೇಕ ಬಗೆಯ ಹಿಗ್ಗುಕುಗ್ಗುಗಳನ್ನು ವ್ಯಕ್ತಪಡಿಸುತ್ತವೆ. ಇನ್ನು—ಬುಲ್ ಬುಲ್, ಶ್ಯಾಮಗಳಂತಹ ಹಕ್ಕಿಗಳು ನುರಿತ ಕಿವಿಗಳಿಗಾಗಿ ನಾದ ತರಂಗದೊಡನೆ ಹಾಡುವಾಗ ಮನುಷ್ಯನ ಮನಸ್ಸು ಬೇಕಾದಂತೆ ತಲೆದೂಗಬಲ್ಲುದು. ಹೆಸರಿಲ್ಲದೆಯೆ, ಮುಳ್ಳು ಬೇಲಿಯಲ್ಲಿಯೋ, ಕಾಡು ಪೊದೆಯಲ್ಲೋ ಮನೆಮಾಡುವ ಎಷ್ಟೋ ಚಿಕ್ಕ ಗುಬ್ಬಿಗಳು ತಮ್ಮ ಜೀವನದ ಉಕ್ಕನ್ನು ರಾಗ ಲಹರಿಯಲ್ಲಿ ತೋರಿಸುತ್ತವೆ. ಇವುಗಳಿಂದಲೂ ಮನುಷ್ಯನ ಮನಸ್ಸು ಹಿಗ್ಗಬಹುದು. ಇವುಗಳ ಹಿಂದೆ ನಿಸರ್ಗದ ಜಡವಸ್ತುಗಳ ಗಾಯನವಿದೆ. ಅದು ಲಲಿತವೂ ಆಗಬಲ್ಲುದು; ಅದ್ಭುತವೂ ಆಗಬಲ್ಲುದು. ನಮಗೆ ಸ್ಫೂರ್ತಿಯನ್ನು ಕೊಡಬಲ್ಲುದು. ಭೀತಿಯನ್ನೂ ಮೊಳಗಿಸಬಲ್ಲುದು. ಕಾರ್ಮುಗಿಲುಗಳು ಕೆದರಿ, ಬಿರುಗಾಳಿಗೆ ಮೈಸೊಕ್ಕಿ ನಿಸರ್ಗವು ಕೆರಳಿದಾಗ ಬಡಿಯುವ ಸಿಡಿಲು ಕ್ರೌರ್ಯದ ಪರಮಾವಧಿ. ಅದರಂತೆ ಕ್ಷಣಿಕವಲ್ಲವಾದರೂ ಅದ್ಭುತವಾದ ಆರ್ಭಟೆಗಳೆಷ್ಟೋ ಪ್ರಕೃತಿಯಲ್ಲಿವೆ. ರೌದ್ರದಲ್ಲಿ ಜ್ವಾಲಾಮುಖಿಯ ಉಕ್ಕನ್ನು ಹೋಲುವ ಆರ್ಭಟೆಗಳೇನು ಕಡಮೆಯಾಗಿವೆ? ಅವನ್ನು ಕೇಳಿಯೇ

ಅನುಭವಿಸಬೇಕೆನ್ನುತ್ತಾರೆ. ನಾನು ಕೇಳಿದವನಲ್ಲ. ಆದರೆ ಅದನ್ನು ಕುರಿತು ಘೋರ ಬಣ್ಣನೆಗಳನ್ನು ಓದಿದ್ದೇನೆ. ಉನ್ನತ ಜಲಪಾತವೊಂದು ಮುಂಗಾರು ಮಳೆಯಿಂದ ಕೊಬ್ಬಿ ಜೋಗಿನಂಥ ಸ್ಥಳದಲ್ಲಿ ಗತಿಗೆಟ್ಟು ಧುಮುಕುವಾಗ, ನಮ್ಮ ಶ್ರವಣಶಕ್ತಿಗೆ ಅತೀತವಾದ ಧ್ವನಿಯುಂಟಾಗುತ್ತದೆ. ಅದರ ಘರ್ಜನೆಯ ಮುಂದೆ ಮನುಷ್ಯ ಬಾಯ್ತೆರೆಯಲಾರ. ಮುಂಗಾರು ಮಳೆಯ ಮುಗಿಲು ಕೆದರಿ, ಕಡಲತೀರದ ಮೇಲೆ ಉಕ್ಕಿ ಚೆಲ್ಲುವಾಗ, ಆದರ ಮೈ ಸೊಕ್ಕಿಗೆ ಬಲಿತು ಕಡಲು ಮೊರೆಯತೊಡಗಿತೆಂದರೆ, ದಡದಲ್ಲಿನ ಗಿಡಮರಗಳು ಅದುರತೊಡಗಿದುವೆಂದರೆ, ಮೇಲಿಂದ ಮಳೆ ಮತಿಗೆಟ್ಟು ಹೊಯ್ಯತೊಡಗಿತೆಂದರೆ, ನಿಸರ್ಗದ ರೌದ್ರ ರೂಪ ಎಣಿಸಲಾರದ್ದು. ಅದರಂತೆ ಕಾಳ್ಗಿಚ್ಚು ಹೊಸ ಹಸಿ ಮರಗಳನ್ನು ಕರುಣೆಯಿಲ್ಲದೆ ನುಂಗಲು ಹೊರಟು ಗಾಳಿಯನ್ನು ತನ್ನ ಬೆಂಗಾವಲಿಗೆ ಕರೆದರೆ, ಆಗಿನದು ಇನ್ನೊಂದೇ ಬಗೆಯ ರೌದ್ರವಾದೀತು. ಇದು ಉಗ್ರತೆಯ ಒಂದು ಮಿತಿಯಾದರೆ ಇನ್ನೊಂದು ತುದಿಯಲ್ಲಿ ಲಾಸ್ಯವನ್ನೂ ಕಾಣಬಹುದು. ನಿಸರ್ಗ ಸದಾ ರೌದ್ರವಾಗಿಯೇ ಇರುವುದಿಲ್ಲ. ಮೆಲುಗಾಳಿಗೆ ನದಿಯ ತೆರೆಗಳ ಗತಿಯು ಕ್ಷೀಣಿಸಿ ದಡವನ್ನು ಚುಂಬಿಸುವ ಸದ್ದು, ಚಿಕ್ಕ ಪುಟ್ಟ ತೊರೆಗಳು ಲಘು ಓಟದಿಂದ ಉರುಟು ಕಲ್ಲುಗಳ ಮೇಲೆ ಓಡುವಾಗ ಉಂಟಾಗುವ ಕಲಕಲ, ರಾತ್ರಿಯಲ್ಲಿ ಹಿಮ ಎಲೆಗಳ ಮೇಲೆ ಮುತ್ತಿನಂತೆ ಹನಿಗೊಂಡು ಒಂದೊಂದಾಗಿ ಉದುರುವಾಗ ಹೊರಡುವ ನಾದ, ಗಾಳಿಯ ಮರಕ್ಕೋ, ತೆಂಗಿನ ಸೋಗೆಗೋ ತರಂಗವಾಗಿ ಬೀಸುವ ಗಾಳಿಯ ಪ್ರವಾಹ, ಬಡಿದು ಹೊಯ್ಯುವ ಸುಯ್ಲು, ನಿಸರ್ಗದ ಶಾಂತವಾದ ಆದರೂ ಶಕ್ತಿಹೀನವಲ್ಲದ ಅನೇಕ ಭಾವಗಳನ್ನು ಮನಸ್ಸಿನಲ್ಲಿ ಮೂಡಿಸಬಲ್ಲುವು. ಇವುಗಳೆಲ್ಲ ಮನುಷ್ಯನಿಗೆ ಕೊಡುವಂಥ ಪ್ರೇರಣೆಗಳು ಕಡಿಮೆಯಾದುವಲ್ಲ. ನಮ್ಮ ದೇಶದವರು ಬರಿಯ ಕೋಗಿಲೆಯ ಪಂಚಮ ದನಿಗೆ, ನವಿಲಿನ ಗಾಂಧಾರದ ಮೈ ಕುಲುಕಿನ ಬೆಡಗಿಗೆ ಮರುಳಾಗಿದ್ದಾರೆ. "ಬೀಥೋವನ್"ನಂಥ ವ್ಯಕ್ತಿ ಬೆಳುದಿಂಗಳನ್ನುಕುರಿತು ಗೀತ ರಚಿಸಿದ; "ಕ್ರಾಸ್" ನೀಲ ಡೇನ್ಯೂಬ್ ನದಿಯನ್ನು ಕುರಿತು ಗೀತ ನಿರ್ಮಿಸಿದ. ನಮ್ಮ ಹಳ್ಳಿಯವರಾದರೂ ಎಷ್ಟೋ ಚಿಕ್ಕ ಪುಟ್ಟ ಹಕ್ಕಿಗಳ ಗೀತಗಳಿಗೆ ಮರುಳಾಗಿ ಜಾನಪದ ಗೀತಗಳನ್ನು ರಚಿಸಿದ್ದಾರೆ. ಬಲ್ಲವರೆನಿಸಿದ ಮಾರ್ಗ ಪದ್ಧತಿಯ ಗಾಯಕರೇ ನಿಸರ್ಗದ ಗೀತಕ್ಕೆ ಕಿವುಡರಾದವರಂತೆ ಕಾಣಿಸುತ್ತದೆ. ಅವರು

ಚೆನ್ನಾಗಿ ಕಿವಿಗೊಟ್ಟಲ್ಲಿ ನಿಸರ್ಗವು ಅವರಿಗೂ ಪ್ರೇರಣೆಕೊಡಬಲ್ಲುದು.

ಗೀತ ವಾದ್ಯ ಮೇಳಗಳು ಮೂಲತಃ ನಿಸರ್ಗ ಗಾನದ ಪ್ರೇರಣೆಗಳೇ. ನಿಸರ್ಗವು ಮನುಷ್ಯನ ಮೂಲಕವಾಗಿ ಇತರ ಜೀವಿಗಳಿಗೆ ಹರಿಯುವ ಸಂಬಂಧವಲ್ಲವೇ? ಇಲ್ಲೂ ಗಾನವೆಂಬುದು, ಮಿತ ಬುದ್ಧಿಯ ಶಾಸ್ತ್ರವೆನಿಸದೆ ಹೋದರೆ, ನಿಸರ್ಗದಿಂದ ದೊರೆತ ಪ್ರೇರಣೆಗಳು ಸುಂದರಶಕ್ತಿಗಳಾಗಿ, ನಮ್ಮ ಬದುಕನ್ನು ಸೊಗಯಿಸಬಲ್ಲುದು.

**ಗಂಧಗಳಿಂದ**

ಬದುಕಿನ ಹಿಗ್ಗಿಗೆ, ರಸ, ಗಂಧ ಸ್ಪರ್ಶಗಳ ಸೀಮೆಯೂ ಸಾಕಷ್ಟು ವಿಶಾಲವಾಗಿದೆ. ನೆಲ ಕಾದು, ಮಳೆಬಡಿದು, ಗಾಳಿ ಹೊಸತಾಗಿ ಮಣ್ಣಿನ ಕಂಪನ್ನು ಹರಡುವಾಗ, ಬೇಸಗೆಯಲ್ಲಿ ಅದು ಹೂಗಳ ಹಂದರವನ್ನು ಹಾದು ವಿವಿಧ ಪರಿಮಳಗಳನ್ನು ತಂದು ಬೀರುವಾಗ, ಊರಿನ ಬಯಲುಗಳು ಸುಗ್ಗಿಯಲ್ಲಿ ಹಣ್ಣಾಗಿ ಹುಲ್ಲಿಂದ ಹೊರಡುವ ವಾಸನೆಯನ್ನು ಗಾಳಿಹೊತ್ತು ತರುವಾಗ ನಮ್ಮ ಮನಸ್ಸು ಹಿಗ್ಗುವುದಿಲ್ಲವೆ? ಈ ಸ್ಥೂಲ ವಾಸನೆಗಳು ಪ್ರೇರಿಸುವಂತೆ ಮನಸ್ಸನ್ನು ಮಲ್ಲಿಗೆ, ಜಾಜಿ ಮೊದಲಾದ ಹೂವುಗಳು ತುಷ್ಟಿಗೊಳಿಸವೆ? ಇಲ್ಲಿಯೂ ನಿಸರ್ಗದ ಕ್ರೂರತನವನ್ನು ಕಾಣಬಹುದು. ಭೀಭತ್ಸ ರೂಪವನ್ನೂ ಕಾಣಬಹುದು. ಸವಿ ಸೊಗಸುಗಳನ್ನೂ ಕಾಣಬಹುದು. ನಮ್ಮ ಎಣಿಕೆಗೆ—ಗಂಧವೆನಿಸುವ ವಸ್ತುಗಳು ಪ್ರಾಣಿಗಳಿಗೆ ಬೇಡವಾಗುವುದೂ, ನಮ್ಮ ಸುಗಂಧ ಅವಕ್ಕೆ ದುರ್ಗಂಧವೆನಿಸುವುದೂ, ಅವುಗಳ ಮೆಚ್ಚುಗೆಯ ವಾಸನೆಗಳು ನಮಗೆ ದುರ್ಗಂಧವೆನಿಸುವುದೂ ನಿತ್ಯದ ಅನುಭವವಾಗಿದೆ. ಬದುಕು ವಿವಿಧ ಜೀವಿಗಳಿಗಾಗಿದೆ. ನಮಗೆ ಸಲ್ಲದ್ದು ಜಗತ್ತಿಗೇ ಸಲ್ಲದು-ಎಂದು ತಿಳಿಯುವ ಕಾರಣವಿಲ್ಲ.

ಮನುಷ್ಯ ಬೆಳೆಯಲು, ಅರಳಲು ಅವನ ಶಕ್ತಿಗಳು ಇನ್ನೆಷ್ಟೋ ಹೆಚ್ಚಿಗೆ ಬೆಳೆಯಬೇಕಾಗಿದೆ. ಅವು ಎಷ್ಟೂ ಬೆಳೆಯಬಹುದು. ಅನುದಿನವೂ ಆಫೀಸು ಕುರ್ಚಿಯಲ್ಲೇ ಸ್ವರ್ಗವನ್ನು ಕಾಣಲು ಬಯಸುವ ಬದಲು ಬಯಲಲ್ಲಿ ಓಡಾಡಲು, ಹಳ್ಳ ಗುಡ್ಡಗಳಲ್ಲಿ ತಿರುಗಾಡಲು, ಸಂಜೆ ಮುಂಜಾನೆಗಳಲ್ಲಿ ದಿಗಂತವನ್ನು ನೋಡಲು ಕಲಿಯಬೇಕು. ನಮಗೆ ವಿರಾಮ ದೊರೆತಾಗಲೆಲ್ಲ ಅನುಕೂಲತೆ ಬಂದಾಗಲೆಲ್ಲ ಕಡಲ ದಂಡೆಯ ಮೇಲೆ ಹಾಯಾಗಿ ಮಲಗುವುದಕ್ಕೋ, ಬೆಟ್ಟಗಳ ತುದಿಯಲ್ಲಿ ಮೌನವಾಗಿ ಕುಳಿತಿರುವುದಕ್ಕೋ ಗಿಡ

ಮರಗಳ ಎಡೆಯಲ್ಲಿ ಹಕ್ಕಿಯಿಂದ ಹೂವಿಗೂ, ಹೂವಿಂದ ಹಕ್ಕಿಗೂ ಕಣ್ಣು ಹೊರಳಿಸುವುದಕ್ಕೂ ಕಲಿಯಬೇಕು. ಪ್ರತಿಯೊಮ್ಮೆಯೂ ಅವನ ಜೀವನ ಇದರಿಂದ ವಿಸ್ತರಿಸೀತು. ತಾಳ್ಮೆ ಔದಾರ್ಯಗಳೂ ಬೆಳೆದಾವು. ನಿಸರ್ಗದ ರಾಗಾಲಾಪದಲ್ಲೊ ರೂಪರೇಖೆಯಲ್ಲೊ ಮೇಳವಿಸದ ಸ್ವರ, ನಡೆ ಇಂಥವೇ ಎಂದು ತಿಳಿಯಲು ಅವನು ಶಕ್ತನಾದಾನು. ಅಲ್ಲಿಯ ಜೀವನವನ್ನು ಕಂಡು ಮನುಷ್ಯನು ಮನುಷ್ಯಸಮಾಜದ ಕೃತಕ ನೀತಿಯ ನೆಲೆ ಎಷ್ಟೊಂದು ಭದ್ರವಾಗಿದೆ ಎಂದು ಅಳೆಯುವುದಕ್ಕೂ ಬಂದೀತು.

ಈ ಬಗೆಯಲ್ಲಿ ಇಂದ್ರಿಯಗಳು ಜೀವನಕ್ಕೆ ತಂದೊಪ್ಪಿಸಬಲ್ಲ ಅನುಭವಗಳ ಸಾಮ್ರಾಜ್ಯವು ಮಿತವಲ್ಲದ್ದು. ಮನುಷ್ಯ ತನ್ನಲ್ಲಿ ತುಂಬಿಸಿಕೊಳ್ಳಬಹುದಾದಷ್ಟು ಜ್ಞಾನವನ್ನು ತುಂಬಿಸಿಕೊಳ್ಳುವುದೇ ಕರ್ತವ್ಯವೆಂದು ತಿಳಿಯಬೇಕು. ಆ ಕೆಲಸಗಳಿಗಾಗಿ ತನ್ನ ಇಂದ್ರಿಯಗಳ ಸೂಕ್ಷ್ಮತೆಯನ್ನು ಎಷ್ಟು ಹೆಚ್ಚಿಸಬಹುದೋ ಅಷ್ಟು ಹೆಚ್ಚಿಸಿಕೊಳ್ಳಬೇಕು.



## ೧೨ ಸ್ವಾರ್ಥದ ಮಿತಿ

**ಹಾನಿ ಕೊಡದ ಸುಖ**

ವ್ಯಕ್ತಿ ಆದಷ್ಟು ಸಂಪೂರ್ಣ ಜೀವನವನ್ನು ಮಾಡಬೇಕು-ಎಂದೊಡನೆಯೆ ತನ್ನ ಸುಖವನ್ನೂ, ಸುಖಸಾಧನಗಳನ್ನೂ ಆದಷ್ಟು ಹೆಚ್ಚಿಸಿಕೊಳ್ಳಬೇಕು ಎಂಬುದನ್ನು ಒಪ್ಪಿದಂತಾಯಿತು. ಆದರೆ ಈ ಮಾತು ಒಂದು ವಿಧದಿಂದ ಮಾತ್ರ ನ್ಯಾಯ. ಜೀವನದ ಸುಖಗಳಿಗೆ ತಾನೊಬ್ಬ ಪಾಲುಗಾರನು ಎಂದು ವ್ಯಕ್ತಿ ತಿಳಿಯುವಂತೆ ಇತರ ಜೀವಿಗಳೂ ತಂತಮ್ಮ ಪಾಲಿಗೆ ಅಧಿಕಾರವುಳ್ಳವುಗಳು ಎಂದೂ ತಿಳಿಯಬೇಕು. ಹೀಗಿರುವಲ್ಲಿ ವ್ಯಕ್ತಿ ಎಲ್ಲಿಯ ತನಕ ಇತರ ಜೀವಿಗಳ ಬದುಕಿನ ಅವಶ್ಯವಾದ ಸಲಕರಣೆಗಳನ್ನು ಅಪಹರಿಸುವುದಿಲ್ಲವೋ ಅಲ್ಲಿಯ ತನಕ ಅವನ ಸ್ವಾರ್ಥಕ್ಕೆ ಅವಕಾಶವಿದೆ. ಇತರರ ದುಃಖದ ಮೇಲೆ ಅವನ ಸುಖವು ಹೊಂದಿರಬಾರದು. ನಿಸರ್ಗ ನಿರೀಕ್ಷಣೆಯಿಂದ ಪಡೆಯಬಹುದಾದ ಸುಖಗಳಾಗಲೀ ಕಲ್ಪನಾಸೃಷ್ಟಿಗಳಿಂದ ಅಂದರೆ ಕಾವ್ಯ, ಕಲೆ ಮೊದಲಾದುವುಗಳಿಂದ ದೊರೆಯುವ ಸುಖಗಳಾಗಲೀ ವ್ಯಕ್ತಿಯನ್ನೇ ಅವಲಂಬಿಸಿರುತ್ತವೆ. ಒಬ್ಬನು ಕಡಲನ್ನು ನೋಡಿ ಆನಂದಪಡುತ್ತಿದ್ದಾನೆ-ಎಂಬುದರಿಂದ ಇನ್ನೊಬ್ಬನು ಅದೇ ಮಾದರಿಯಲ್ಲಿ ಸುಖಪಡಲು ಯಾವ ಅಡಚಣೆಯೂ ಇಲ್ಲ. ಇಂಥ ಸುಖಗಳನ್ನು ಹೊಂದಿ ಮನುಷ್ಯ ಕೆಟ್ಟಾನು ಎಂಬ ಭೀತಿಯೂ ಇಲ್ಲ.

**ಸುಖ ಸಾಧನಗಳು**

ಎಲ್ಲಿ ಮನುಷ್ಯನ ಸುಖಕ್ಕೂ ಬೆಳವಣಿಗೆಗೂ ವಸ್ತು ಒಡವೆಗಳ ಸಂಗ್ರಹ ಕಾರಣವಾಗುತ್ತದೆಯೊ, ಇತರ ಜೀವಿಗಳ ಮೇಲೆ ಅಧಿಕಾರ ನಡೆಸಬೇಕಾಗುತ್ತದೆಯೋ, ಅಲ್ಲಿ ಸ್ಪರ್ಧೆಯುಂಟಾಗುತ್ತದೆ. ಪ್ರಪಂಚದ ಯೋಗ್ಯ ಸಂಪತ್ತನ್ನು ಬಲಿಷ್ಠರಾದ ಕೆಲವರೇ ಹಂಚಿಕೊಂಡರೆ ಇನ್ನುಳಿದವರ ನೆಲೆ, ಸುಖಗಳಿಗೆ ಅವಕಾಶವಿಲ್ಲದಾದೀತು. ಭಂಡವಳುಗಾರಿಕೆ ಈ ರೀತಿಯಿಂದ ಮನುಷ್ಯ ಸಮಾಜದಲ್ಲಿ ಮಾಡುತ್ತಿರುವ ಹಾನಿ ಬಹಳ. ಹಲವು ದೇಶಗಳಲ್ಲಿ ರೂಢಿಯಾಗಿರುವ ಧನಸತ್ತೆಯ ಪದ್ಧತಿ ಬಹು ಜನರ ಸುಖವನ್ನಪಹರಿಸಿ ಕೆಲವರು ಸುಖಪಡಲು ಕಾರಣವಾಗಿದೆ. ಜನಜೀವನಕ್ಕೆ ಅವಶ್ಯವಾದ ಊರಿನ

ಕೃಷಿಕ ಭೂಮಿಗಳು ಊರಿನ ಕೆಲವೇ ಜನರ ಕೈಗೆ ಬಂದು, ಉಳಿದವರು ತಮ್ಮದೆಂಬ ಎಡೆಯಿಲ್ಲದೆ, ಅನ್ನಕ್ಕೆ ನರಳುವಂತಾದೀತು. ಅದೇ ಮಾದರಿಯಲ್ಲಿ ಗನಿಗಳ ಉತ್ಪನ್ನವೂ ಕಡಲಿನ ಉತ್ಪನ್ನವೂ ಉಳಿದವರಿಗಿಲ್ಲದೆ ಕೇರ ಕೆಲವರ ಸೊತ್ತಾಗಲೂಬಾರದು. ಜನಜೀವನದ ಬದುಕು ಸಾಂಗವಾಗಿ ಸಾಗಲು ಸಮಾಜದ ಮುಖ್ಯ ಸುಖಸಾಮಗ್ರಿಗಳಾಗಲಿ, ಅನ್ನ ಅರಿವೆಗಳಾಗಲಿ, ಅವುಗಳನ್ನೊದಗಿಸುವ ಸಾಧನಗಳಾಗಲಿ ಒಟ್ಟು ಸಮಾಜದ ಹಿತಕ್ಕಾಗಿರಬೇಕಲ್ಲದೆ ಕೆಲವರೇ ಬಾಚಿ, ಬಗರುವಂಥ ಸ್ಥಿತಿಯಲ್ಲಿರಕೂಡದು. ಈ ದೃಷ್ಟಿಯಿಂದ ನಾವು ಸಮಾಜವಾದವನ್ನು ಒಪ್ಪಲೇಬೇಕು. ಮಾತ್ರವಲ್ಲ ಈಗಿನ ದಿನಗಳಲ್ಲಿ ವಾಹನ, ಯಂತ್ರಸಾಧನ ಮೊದಲಾದುವುಗಳಿಂದಾಗಿ ಪ್ರಪಂಚವೆಲ್ಲವೂ ಒಂದೇ ಸಮಾಜ ಎನಿಸಿಕೊಂಡಿದೆ. ನಮ್ಮ ದೇಶಕ್ಕೆ ಬೇಕಾಗುವ ಯಂತ್ರ ಸಲಕರಣೆಗಳು ನಮಗೆ ಯೂರೋಪಿನಿಂದ ಬರಬೇಕಾದೀತು. ಅವರಿಗೆ ಬೇಕಾಗುವ ಹತ್ತಿಯನ್ನು ನಾವು ಒದಗಿಸಬೇಕಾದೀತು. ಈ ವಿಶಾಲದೃಷ್ಟಿಯಿಂದ ದೇಶ ವಿದೇಶಗಳೊಳಗಿನ ಆರ್ಥಿಕ ಯೋಜನೆಗಳು ನಿರ್ಮಾಣವಾಗದಿದ್ದರೆ, ಯುದ್ಧ ಅನಿವಾರ್ಯವಾಗುತ್ತದೆ. ಶಾಂತಿಸಂಧಾನಗಳು ಬರಿಯ ಕಾಲಕ್ಷೇಪದ ಸೋಗುಗಳಾಗುತ್ತವೆ.

### ಎಲ್ಲ ಜೀವಿಗಳ ಹಕ್ಕು

ಮುಖ್ಯ ಸಾಧನಗಳನ್ನು ಸಾಮಾಜಿಕವೆಂದು ತಿಳಿಯುವಾಗಲೂ ಇಂದಿನ ಸಮಾಜವೊಂದನ್ನೇ ನಾವು ಎಣಿಸಿದರೂ ತಪ್ಪಾಗುತ್ತದೆ. ಊರಿನ ಕಾಡುಗಳಾಗಲಿ, ಗನಿಗಳ ಕಲ್ಲಿದ್ದಲು ಪೆಟ್ರೋಲು, ಚಿನ್ನಗಳಾಗಲಿ, ಕಡಲಿನ ಮೀನುಗಳಾಗಲಿ ಈಗಿನ ತಲೆಮಾರಿನವರಿಗೆ ಮೀಸಲಾಗಿಟ್ಟ ಬದುಕುಗಳಲ್ಲ. ಅವುಗಳಲ್ಲಿ ಹಲವು ನಿನ್ನಿನ ಜನತೆಗೆ ದೊರಕಿರದವು. ಈ ದಿನ ಹಲವಾರು ಅಂಥ ಗನಿಗಳೂ, ಸಂಪತ್ತುಗಳೂ ನಮ್ಮ ಪಾಲಿಗೆ ದೊರಕಿರುತ್ತವೆ ನಿಜ. ಬರಿಯ ನೂರಿನ್ನೂರು ವರ್ಷಗಳಲ್ಲೋ, ಸಾವಿರ ವರ್ಷಗಳಲ್ಲೋ ಅವನ್ನೆಲ್ಲ ಮುಗಿಸಿ ಬರಿದು ಮಾಡುವ ದೃಷ್ಟಿಯಿಂದ, ಒಂದು ಸಮಾಜವಾಗಲಿ ಒಂದು ತಲೆಮಾರಿನ ಜನರಾಗಲಿ ವರ್ತಿಸಬಾರದು. ನಮ್ಮ ವಸ್ತು ಒಡವೆಗಳ ದೃಷ್ಟಿಗೂ ಒಂದು ಆಯ, ಅಳತೆಯನ್ನಿಟ್ಟುಕೊಂಡಿರಬೇಕು. ಮನುಷ್ಯ ಕುಟುಂಬವು ಪ್ರಪಂಚದ ವಸ್ತು, ಒಡವೆಗಳನ್ನು ಎಷ್ಟೊಂದು ಹಕ್ಕಿನಿಂದ ಬಯಸುತ್ತದೆಯೋ ಅದೇ ಬಗೆಯ ಹಕ್ಕು, ಪ್ರಪಂಚದ ಇತರ ಜೀವಿಗಳಿಗೂ

ಸಸ್ಯಗಳಿಗೂ ಇರಲಾರದೇ? ಊರಿನ ಕಾಡುಗಳ ಪಾರುಪತ್ಯವೆಲ್ಲ ಮನುಷ್ಯನಿಗೇ ಸಂದುವೆ? ಕಡಲಿನ ಮೀನುಗಳೆಲ್ಲ ಅವನ ಹೊಟ್ಟೆಗಾಗಿಯೆ ನಿರ್ಮಾಣವಾದುವೆ? ಸುಂದರವಾದ ಹಕ್ಕಿಗಳ ಗರಿ, ತುಪ್ಪಳಗಳು ಯುರೋಪಿನ ಮಹಿಳೆಯರ ಟೋಪಿಗಳನ್ನು ಅಲಂಕರಿಸಲು ನಿರ್ಮಾಣವಾದುವೇ-ಎಂಬುದನ್ನು ನಾವು ವಿಚಾರಿಸಬೇಕು. ಮನುಷ್ಯ ತನ್ನ ಬದುಕಿನ ಎಡೆಯನ್ನೂ ಆವಶ್ಯಕತೆಯನ್ನೂ ಇನ್ನೊಬ್ಬನು ಅಪಹರಿಸಬಾರದು ಎಂದು ಹೇಗೆ ತಿಳಿಯುತ್ತಾನೆಯೋ ಹಾಗೆಯೇ ಇತರ ಜೀವಿಗಳೂ ಬದುಕಿನ ನೆಲೆಯನ್ನು ಕೇಳಿಯೇ ಕೇಳುತ್ತವೆ. ನಿಸರ್ಗದಲ್ಲಿ ಬಲಿಷ್ಠನಾದವನಿಗೆ ಮಾತ್ರ ಬಾಳ್ವೆ ಎಂಬ ಸಿದ್ಧಾಂತ ಅನೇಕ ಬಾರಿ ನಮಗೆ ಒಪ್ಪಿಗೆಯಾಗಿ ಕಂಡುಬಂದರೂ, ಜೀವನದ ಒಟ್ಟು ಹಿತಕ್ಕೆ ಅದೊಂದೇ ನ್ಯಾಯವೆನಿಸುವ ಸಿದ್ಧಾಂತವಲ್ಲ. ಮನುಷ್ಯ ಎಷ್ಟೆಷ್ಟು ಇತರರ ಸುಖವನ್ನು ಅಪಹರಿಸುತ್ತಾನೋ ಅಷ್ಟು ಒಟ್ಟು ಜೀವನ ಬರಿದಾಗುತ್ತದೆ. ಆದರಿಂದ ನಾಳಿನ ಮನುಷ್ಯ ಜೀವನ ವ್ಯಥೆಗೆ ಗುರಿಯಾಗಬಹುದು. ಪಶುಪ್ರಾಣಿಗಳ ಜೀವನವನ್ನು ಪರಿಶೀಲಿಸಿದವರಿಗೆ ಈ ಮಾತು ಚೆನ್ನಾಗಿ ತಿಳಿದೀತು. ವಿಜ್ಞಾನಿಗಳು ಜೀವಿಗಳ ಸಮತೋಲ (Balance of life) ಎಂಬೊಂದು ತತ್ವವನ್ನು ಒಪ್ಪುತ್ತಾರೆ. ವ್ಯಕ್ತಿ ಬರಿಯ ತನ್ನೊಬ್ಬನನ್ನೇ ನೋಡಿಕೊಂಡು ವ್ಯವಹರಿಸುವ ನೀತಿಯಿಂದ ಸಮಾಜದ ಇಂದಿನ ಮತ್ತು ನಾಳಿನ ಜೀವನಗಳೆರಡಕ್ಕೂ ಧಕ್ಕೆ ಬರುತ್ತದೆ. ಜೀವ ಜೀವಿಗಳು ಪರಸ್ಪರ ಒಂದನ್ನೊಂದು ಹೊಂದಿಕೊಂಡಿವೆ. ಮನುಷ್ಯ ಕಾಳನ್ನು ತಿಂದು ಬೆಳೆಯುತ್ತಾನೆ. ಅವನ ಆಹಾರಕ್ಕೆ ಎತ್ತು, ದನಗಳು ನೆರವಾಗಬೇಕು. ಅವನು ಬೆಳೆದ ಬೆಳೆ ಸಮೃದ್ಧಿಯಾಗಲು ನೆಲದಲ್ಲಿ ಸಾರಜನಕವನ್ನು ಒದಗಿಸುವ ಬೆಕ್ಟೀರಿಯಗಳಿಂದ ತೊಡಗಿ, ಪರಾಗ ಮಿಶ್ರಣ ಮಾಡಿ ಕಾಳುಗಳಿಗೆ, ಬೀಜಗಳಿಗೆ ಕಾರಣವಾಗುವ ಪತಂಗಗಳ ತನಕವೂ ಇರಬೇಕು. ಅವನ ಬೆಳೆಯನ್ನು ಹಾಳುಮಾಡುವ ಇಲಿಗಳ ನಾಶಕ್ಕೆ ಹಾವುಗಳು ಬೇಕು. ಕ್ರಿಮಿಕೀಟಗಳ ನಾಶಕ್ಕೆ ನೂರಾರು ಬಗೆಯ ಹಕ್ಕಿಗಳು ಬೇಕು. ಇವೆಲ್ಲ ಮಾನವನ ಹೇಳಿಕೆಯಂತೆ ವರ್ತಿಸದಿದ್ದರೂ, ಅವಿಲ್ಲದೆ ಮನುಷ್ಯರ ಕೃಷಿಕ ಜೀವನ ಸಾಗಲಾರದು. ಆದುದರಿಂದಲೇ ವ್ಯಕ್ತಿ ತನ್ನ ಸ್ವಾರ್ಥವನ್ನು ಸಾಧಿಸುವಾಗಲೂ, ತನಗೆ ಎಷ್ಟು ಕಡಿಮೆ ಸಾಕೋ ಅಷ್ಟರಿಂದ ತೃಪ್ತನಾಗಬೇಕು. ಇತರ ಪ್ರಾಣಿಗಳ ಸುಖವನ್ನು ಸಾಧಿಸದವನು ತನ್ನ ಸುಖವನ್ನೂ ಸಾಧಿಸಲಾರ.

